# ಮಾಯಾವಾದಖಂಡನ

## ಕನ್ನಡ ಅನುವಾದ





ಅನುವಾದ
ಪಂ. ಕಾಂತೇಶಾಚಾರ್ಯ
ಕದರಮಂಡಲಗಿ

ಪ್ರಕಾಶನ:
ವಿಶ್ವಮಧ್ವಮಹಾಪರಿಷತ್
ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 112

# ಮಾಯಾವಾದಖಂಡನ

ಕನ್ನಡ ಅನುವಾದ

... ಅನುವಾದ ...

ಪಂ. ಕಾಂತೇಶಾಚಾರ್ಯ ಕದರಮಂಡಲಗಿ M.A

... ಪ್ರಕಾಶನ ...

ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ, ಬೆಂಗಳೂರು

# ಮಾಯಾವಾದಖಂಡನ

**ಕನ್ನಡ ಅನುವಾದ**

**ಅನುವಾದ : ಪಂ. ಕಾಂತೇಶಾಚಾರ್ಯ ಕದರಮಂಡಲಗಿ**

ಮೊದಲ ಮುದ್ರಣ : ಸೆಪ್ಟೆಂಬರ್ 2012 - ಪ್ರತಿಗಳು : 1000
*(ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ 17ನೇ ಚಾತುರ್ಮಾಸ್ಯ ಶುಭಸಂದರ್ಭ ಬೆಂಗಳೂರು)*

ದ್ವಿತೀಯ ಮುದ್ರಣ : ಜನವರಿ 2016 - ಪ್ರತಿಗಳು : 1000

ಪುಟಗಳು : 104



**ಬೆಲೆ : ರೂ.50/-**

1. **Vishva Madhwa Maha Parishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
Phone : 080 26603692

**ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ**

**ಮುಖಪುಟ ವಿನ್ಯಾಸ : ಗೋವಿಂದ ನವಲಿ**

**ಮುದ್ರಣ : ವಾಗರ್ಥ, ಬೆಂಗಳೂರು-೧೯.** vagartha@yahoo.com

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೦೮
ಶ್ರೀ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

# ಅನುಗ್ರಹಸಂದೇಶ

ಭಗವಂತನಲ್ಲಿ ಸರ್ವಕರ್ತೃತ್ವದ ಮೂಲಕ ಸರ್ವೋತ್ತಮತ್ವವನ್ನು ದೃಢವಾಗಿ ತಿಳಿಯಬೇಕಾದದ್ದು ವೈಷ್ಣವನ ಮುಖ್ಯಕರ್ತವ್ಯ. ಅದುವೇ ಮೋಕ್ಷಕ್ಕೆ ಸಾಧನ. ಭಗವಂತ ಚೇತನಾಚೇತನಾತ್ಮಕವಾದ ಸಮಸ್ತ ಪ್ರಪಂಚಕ್ಕೆ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬುದಾಗಿ ಎಷ್ಟು ಗಟ್ಟಿಯಾಗಿ ಅರಿತುಕೊಳ್ಳುತ್ತೇವೆಯೋ ಅಷ್ಟು ಗಟ್ಟಿಯಾಗಿ ಸರ್ವೋತ್ತಮತ್ವವು ವಿದಿತವಾಗುತ್ತದೆ. ಈ ಹಿನ್ನೆಲೆಯಲ್ಲಿ ಭಗವಂತ ಸರ್ವಕರ್ತಾ ಎಂಬ ನಿಶ್ಚಯ ಅತ್ಯಂತ ಆವಶ್ಯಕವಾಗಿದೆ.

ಭಗವಂತ ಸರ್ವಕರ್ತಾ ಎಂದು ಹೇಳಲು ಯಾವಾಗ ಸಾಧ್ಯ ? ಚೇತನಾ-ಚೇತನಾತ್ಮಕವಾದ ಸಮಸ್ತ ಪ್ರಪಂಚ ಸತ್ಯವಾಗಿದ್ದಾಗ ಮಾತ್ರ ಸರ್ವಕರ್ತೃತ್ವವು ಉಪಪನ್ನವಾಗುತ್ತದೆ. ಜಗತ್ತು ಮಿಥ್ಯೆಯಾದರೆ ಅದರ ಸೃಷ್ಟ್ಯಾದಿಗಳು ಅನುಪಪನ್ನ. ಹಾಗಾದರೆ ಭಗವಂತನಿಗೆ ಸರ್ವಕರ್ತೃತ್ವ ಕೂಡಬೇಕಾದರೆ ಜಗತ್ತಿಗೆ ಸತ್ಯತ್ವವನ್ನು ಹೇಳಬೇಕಾದದ್ದು ಅನಿವಾರ್ಯ.

ಈ ದೃಷ್ಟಿಯಿಂದ ಜಗತ್ತಿನ ಮಿಥ್ಯಾತ್ವವನ್ನು ನಿರಾಕರಿಸಿ ಸತ್ಯತ್ವವನ್ನು ಸಮರ್ಥಿಸುವ ಕೆಲಸವನ್ನು ಶ್ರೀಮದಾಚಾರ್ಯರು ಅನುವ್ಯಾಖ್ಯಾನಾದಿ ಉದ್ಗ್ರಂಥಗಳಲ್ಲಿ ಹಾಗೂ ಖಂಡನತ್ರಯ ಮೊದಲಾದ ಪ್ರಕರಣಗ್ರಂಥಗಳಲ್ಲಿ ಮಾಡಿದ್ದಾರೆ.

ವೇದಾಂತಗ್ರಂಥಗಳ ಅಧ್ಯಯನವನ್ನು ಪ್ರಾರಂಭಿಸುವ ಜಿಜ್ಞಾಸುಗಳಿಗೆ ಖಂಡನತ್ರಯವು ಬುನಾದಿ ಹಾಕುವ ಉತ್ತಮ ಗ್ರಂಥಗಳಾಗಿವೆ. ಗಾತ್ರದಲ್ಲಿ ಚಿಕ್ಕದಾದರೂ ಅರ್ಥದಲ್ಲಿ ಬೃಹತ್ತಾದವುಗಳು.

ಖಂಡನತ್ರಯಗಳಲ್ಲಿ ಒಂದಾದದ್ದು ಮಾಯಾವಾದಖಂಡನ. ಆಚಾರ್ಯರ ಅಭಿಪ್ರಾಯವನ್ನು ಸ್ಫುಟವಾಗಿ, ಸುಂದರವಾಗಿ ತಮ್ಮ ಟೀಕೆಯಲ್ಲಿ ನಿರೂಪಿಸಿದ್ದಾರೆ ಟೀಕಾಕೃತ್ಪಾದರು. ಟೀಕೆಯ ಅಭಿಪ್ರಾಯವನ್ನು, ಗೂಢವಾದ ಅರ್ಥಗಳನ್ನು ತಿಳಿದುಕೊಳ್ಳಲು ಶ್ರೀವ್ಯಾಸರಾಜರ ಟಿಪ್ಪಣಿ, ಶ್ರೀಸತ್ಯನಾಥತೀರ್ಥರ ಟಿಪ್ಪಣಿ,

ಶ್ರೀನಿವಾಸತೀರ್ಥರ ಟಿಪ್ಪಣಿ, ಪಾಂಡುರಂಗೀ ಆಚಾರ್ಯರ ಟಿಪ್ಪಣಿಗಳು ವಿಶೇಷ ಸಹಕಾರಿಯಾಗಿವೆ.

ನಮ್ಮ ಪರಮಪ್ರಿಯಶಿಷ್ಯನಾದ ಕಾಂತೇಶಾಚಾರ್ಯನು ಇಂತಹ ಮಾಯಾವಾದಖಂಡನಕ್ಕೆ ಟೀಕಾ-ಟಿಪ್ಪಣಿಗಳ ಅಭಿಪ್ರಾಯದೊಂದಿಗೆ ಕನ್ನಡ ಅನುವಾದ ಮಾಡಿದ್ದಾನೆ. ಅನುವಾದ ಸುಂದರವಾಗಿ ಮೂಡಿಬಂದಿದೆ. ಗುರುಮುಖದಿಂದಲೇ ಕೇಳಿ ಗ್ರಂಥದ ಅಧ್ಯಯನ ಮಾಡಬೇಕು. ಗುರುಗಳಿಂದ ಪಾಠ ಕೇಳಿದ ಮೇಲೆ ಚಿಂತನೆ ಮಾಡುವುದಕ್ಕೆ ಅನುವಾದಗ್ರಂಥ ವಿಶೇಷ ಸಹಕಾರಿಯಾಗಿದೆ.

ಕಾಂತೇಶಾಚಾರ್ಯನು ಈಗಾಗಲೇ ಅನೇಕ ಅನುವಾದಗ್ರಂಥಗಳನ್ನು, ಪ್ರವಚನಸಂಗ್ರಹ ಕೃತಿಗಳನ್ನು ಹೊರತಂದಿದ್ದಾನೆ. ಬಿಂಬಪ್ರತಿಬಿಂಬಭಾವದ ಬಗ್ಗೆ ಪಿ.ಎಚ್.ಡಿ ಮಾಡಿ ಡಾಕ್ಟರೇಟ್ ಪಡೆದಿದ್ದಾನೆ. ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯುವಂತೆ, ಹೆಚ್ಚಿನ ಗ್ರಂಥಗಳನ್ನು ಹೊರತರುವಂತೆ ಇವನಿಗೆ ವಿಶೇಷ ಅನುಗ್ರಹ ಮಾಡಲಿ ಎಂಬುದಾಗಿ ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮ-ದಿಗ್ವಿಜಯರಾಮ-ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳು

# ಇಣಕು ನೋಟ

ಶ್ರೀಮದಾಚಾರ್ಯರು ರಚಿಸಿರುವ ಸರ್ವಮೂಲಗ್ರಂಥಗಳಲ್ಲಿ ''ಖಂಡನತ್ರಯ'' ಎಂದೇ ಪ್ರಸಿದ್ಧವಾದ ಗ್ರಂಥಗಳು 1) ಮಾಯಾವಾದಖಂಡನ 2) ಪ್ರಪಂಚಮಿಥ್ಯಾತ್ವಾನುಮಾನಖಂಡನ 3) ಉಪಾಧಿಖಂಡನ. ಈ ಮೂರೂ ಗ್ರಂಥಗಳು ಮಾಯಾವಾದಮತವನ್ನು ಅನೇಕರೀತಿಯಿಂದ ಖಂಡಿಸುವುದಕ್ಕಾಗಿ ಹೊರಟಿವೆ.

**ಮಾಯಾವಾದಖಂಡನ**

''ವೇದಾದಿಶಾಸ್ತ್ರಗಳು ಜೀವ-ಬ್ರಹ್ಮರ ಐಕ್ಯವನ್ನು ಪ್ರತಿಪಾದಿಸುವುದಿಲ್ಲ. ವಿಷ್ಣುವಿನ ಸರ್ವೋತ್ತಮತ್ವವೇ ಸರ್ವಶಾಸ್ತ್ರಗಳ ಪ್ರತಿಪಾದ್ಯಪ್ರಮೇಯ'' ಎಂದು ಸಮರ್ಥಿಸುವುದಕ್ಕಾಗಿ ಹೊರಟದ್ದು ಮಾಯಾವಾದಖಂಡನ.

ಗ್ರಂಥವು ಗಾತ್ರದೃಷ್ಟಿಯಲ್ಲಿ ಚಿಕ್ಕದಾದರೂ ಬಹಳ ಸುಂದರವಾಗಿದೆ. ಚಿಕ್ಕದಾಗಿ ಚೊಕ್ಕವಾಗಿ ಮಾಯಾವಾದವನ್ನು ಖಂಡಿಸಿದ್ದಾರೆ ಆಚಾರ್ಯರು. ಟೀಕಾಕೃತ್ಪಾದರು ತಮ್ಮ ಮನೋಹರಶೈಲಿಯ ಸುಂದರವಾಕ್ಯಗಳಿಂದ ವಿಷಯಗಳನ್ನು ಸಮರ್ಪಕವಾಗಿ ಮಂಡಿಸಿದ್ದಾರೆ. ವ್ಯಾಸರಾಜರ ಮಂದಾರಮಂಜರೀ, ಶ್ರೀಸತ್ಯನಾಥತೀರ್ಥರ ಮಾಯಾವಾದಪರಶು, ಶ್ರೀನಿವಾಸತೀರ್ಥರ ದುರ್ಗಮಾರ್ಥವ್ಯಾಖ್ಯಾ, ಪಾಂಡುರಂಗೀ ಕೇಶವಾಚಾರ್ಯರ ವಿಷಮಪದವಾಕ್ಯಾರ್ಥವಿವರಣ ಹೀಗೆ ಎಲ್ಲ ಟಿಪ್ಪಣಿಗಳೂ ಮೂಲ-ಟೀಕಾಗ್ರಂಥಗಳ ಅಧ್ಯಯನಕ್ಕೆ ಬಹಳ ಸಹಕಾರಿಯಾಗಿವೆ. ಮೂಲ-ಟೀಕಾಗ್ರಂಥಗಳಲ್ಲಿ ಅಡಗಿದ ಗೂಢಾಭಿಪ್ರಾಯಗಳನ್ನು, ಟೀಕೆಯ ನಿಜವಾದ ಭಾವವನ್ನು, ರಹಸ್ಯವಿಚಾರಗಳನ್ನು ಎತ್ತಿ ತೋರಿಸಿದ್ದಾರೆ ಟಿಪ್ಪಣೀಕಾರರು.

**ಖಂಡನತ್ರಯಕ್ಕೆ ಅನುವಾದ**

ಖಂಡನತ್ರಯ ಎಂದರೆ ವೇದಾಂತಗ್ರಂಥಗಳ ಅಧ್ಯಯನ ಪ್ರಾರಂಭಿಸುವ ಜಿಜ್ಞಾಸುಗಳಿಗೆ ಉತ್ತಮ ಬುನಾದಿ ಹಾಕುವ ಪುಟ್ಟ ಪುಟ್ಟ ಗ್ರಂಥಗಳು. ಅಂತೆಯೇ ಪಾಠಕ್ರಮದಲ್ಲಿ ನಿಯಮೇನ ಅಳವಡಿಸುವ ಪಠ್ಯಗ್ರಂಥಗಳಾಗಿವೆ.

ಇಂತಹ ಖಂಡನತ್ರಯದ ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಸಹಾಯಕವಾಗಲಿ ಎಂಬ ದೃಷ್ಟಿಯಿಂದ ಖಂಡನತ್ರಯಕ್ಕೆ ಕನ್ನಡ ಅನುವಾದಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ. ಅದರ ಮೊದಲ ಹಂತವಾಗಿ 'ಮಾಯಾವಾದಖಂಡನ'ಗ್ರಂಥಕ್ಕೆ ಕನ್ನಡ ಅನುವಾದ ಸಿದ್ಧವಾಗಿದೆ.

ವಾದಾವಲೀ ಗ್ರಂಥದ ಕನ್ನಡ ಅನುವಾದ ನನ್ನ ಮೊಟ್ಟಮೊದಲ ಕೃತಿ. ಅನುವಾದ ಹೇಗೆ ಮಾಡಬೇಕು ? ಪುಸ್ತಕ ಹೊರತರುವುದು ಹೇಗೆ ? ಇತ್ಯಾದಿ ವಿಚಾರಗಳು ಅನುಭವಕ್ಕೆ ದೂರವಾಗಿದ್ದವು. ಆದರೂ ಅದರಲ್ಲಿ ಯಶಸ್ಸು ಸಿಕ್ಕಿದ್ದು ಕೇವಲ ಗುರುಗಳು ಅನುಗ್ರಹಪೂರ್ವಕವಾಗಿ ಕೊಟ್ಟ ಮಂತ್ರಾಕ್ಷತೆಯ ಫಲ ಎಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

**ಅನುವಾದದಲ್ಲಿ ಸ್ವಲ್ಪ ಸುಧಾರಣೆ**

ವಾದಾವಲೀಗ್ರಂಥಕ್ಕೆ ಅನುವಾದ ಮಾಡುವಾಗ ಎಲ್ಲ ಟಿಪ್ಪಣಿಗಳ ವಿಚಾರಗಳನ್ನೂ ಸೇರಿಸಿಕೊಂಡು ಟೀಕೆಗೆ ಅನುವಾದ ಮಾಡಿದೆ. ವಿಚಾರಗಳು ಚೆನ್ನಾಗಿ ವಿಸ್ತೃತವಾಗಿ ಮೂಡಿಬಂದವು. ಆದರೆ ಟೀಕೆಯ ಅರ್ಥ, ಟಿಪ್ಪಣಿಗಳ ವಿಶೇಷವಿಚಾರಗಳು ಹೀಗೆ ಬೇರ್ಪಡಿಸಿ ಅನುವಾದ ಮಾಡಲಿಲ್ಲವಾದ್ದರಿಂದ, ಗ್ರಂಥವನ್ನು ಓದುವ ಜಿಜ್ಞಾಸುಗಳಿಗೆ ಕೇವಲ ಟೀಕಾಪಂಕ್ತಿಗಳ ಅರ್ಥ ತಿಳಿಯುವುದು ಸ್ವಲ್ಪ ಕ್ಲಿಷ್ಟವಾಯಿತು.

ಈ ವಿಚಾರವನ್ನು ನನ್ನ ಗಮನಕ್ಕೆ ತಂದ ಗುರುಗಳಾದ ಆಲೂರು ಆಚಾರ್ಯರು ಮುಂದಿನ ಅನುವಾದಕಾರ್ಯಗಳಲ್ಲಿ ಟೀಕೆಯ ಅರ್ಥ, ಟಿಪ್ಪಣಿಗಳ ವಿಶೇಷವಿಚಾರಗಳನ್ನು ಪ್ರತ್ಯೇಕ ಮಾಡಿ ನೀಡುವಂತೆ ಸೂಚಿಸಿದರು. ಗುರುಗಳು ನೀಡಿದ ಸೂಚನೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಮೊದಲು ಕೇವಲ ಟೀಕೆಯ ಅನುವಾದ, ನಂತರ ಟಿಪ್ಪಣಿಗಳ ವಿಶೇಷವಿಚಾರಗಳು, ಈ ಕ್ರಮದಲ್ಲಿ ಮಾಯಾವಾದಖಂಡನದ ಅನುವಾದಕಾರ್ಯ ಮಾಡಿದ್ದೇನೆ.

ಈ ಅನುವಾದ ಕಾರ್ಯದಲ್ಲಿ ಕೆಲವು ಕ್ರಮಗಳನ್ನು ಅಳವಡಿಸಿಕೊಳ್ಳಲಾಗಿದೆ.

1) ಮೊದಲು ಟೀಕಾಪಂಕ್ತಿ ಏಕೆ ಹೊರಟಿದೆ ? ಎಂದು ತಿಳಿಯಲು ಅವತಾರಿಕೆ ನೀಡುವುದು.

2) ಶ್ರೀನಿವಾಸತೀರ್ಥರ ಟಿಪ್ಪಣಿಯನ್ನು ಪೂರ್ಣವಾಗಿ ಇಟ್ಟುಕೊಂಡು ಅದಕ್ಕನುಗುಣವಾಗಿ ಟೀಕೆಯ ಅಭಿಪ್ರಾಯವನ್ನು ಸ್ಪಷ್ಟಮಾಡುವುದು.

3) ಟಿಪ್ಪಣಿಗಳಲ್ಲಿ ತಿಳಿಸಿರುವ ವಿವರಣೆಯನ್ನು, ವಿಶೇಷವಿಚಾರಗಳನ್ನು, ಸೂಕ್ಷ್ಮವಿಷಯಗಳನ್ನು ''ವಿವರಣೆ'' ''ವಿಶೇಷವಿಚಾರ'' ''ಟೀಕಾವಿಶೇಷಾರ್ಥ'' ಇತ್ಯಾದಿ ಉಪನಾಮಗಳಲ್ಲಿ ವಿವರಿಸುವುದು.

4) ಟೀಕಾಪಂಕ್ತಿಗಳಲ್ಲಿ ಕಠಿಣಪದಗಳಿಗೆ ಅರ್ಥ ತಿಳಿಸುವುದು, ವಾಕ್ಯದ ಭಾವ ತಿಳಿಸುವುದು, ಕೆಲವು ಟೀಕಾಪಂಕ್ತಿಗಳ ಪ್ರಕ್ಷೇಪವಿಚಾರ ಇತ್ಯಾದಿ ಕಾರ್ಯಗಳನ್ನು ಅಡಿಟಿಪ್ಪಣಿಯಲ್ಲಿ ಕೈಗೊಳ್ಳಲಾಗಿದೆ. ಹೀಗೆ ಮೂರು-ನಾಲ್ಕು ಕ್ರಮಗಳನ್ನು ಅನುಸರಿಸಿ ಕನ್ನಡಾನುವಾದ ಮಾಡಲಾಗಿದೆ.

**''ಗುರುವಂದನೆ''**

ಶ್ರೀಜಯತೀರ್ಥವಿದ್ಯಾಪೀಠದಲ್ಲಿ ಅಧ್ಯಯನ ಮಾಡುವಾಗ ನಮ್ಮ ವರ್ಗಕ್ಕೆ ಮಾಯಾವಾದಖಂಡನಗ್ರಂಥದ ಪಾಠ ಹೇಳಿ ಜ್ಞಾನ ನೀಡಿದವರು ಪಂ.ನರಸಿಂಹಾಚಾರ್ಯ ಕಟ್ಟಿ ಅವರು. ಪ್ರಾಮಾಣಿಕತೆಯಿಂದ ಚೆನ್ನಾಗಿ ಪಾಠ ಹೇಳಿ ಗ್ರಂಥವನ್ನು ತಯಾರು ಮಾಡಿಸಿದ್ದರು. ಅವರಿಗೆ ಈ ಸಂದರ್ಭದಲ್ಲಿ ಭಕ್ತಿಪೂರ್ವಕ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ.

ನಮ್ಮ ವರ್ಗಕ್ಕೆ ವಿಶೇಷವಾಗಿ ಸಮಗ್ರ ವೇದಾಂತಗ್ರಂಥಗಳ ಪಾಠ ಹೇಳಿ, ವೇದಾಂತದ ಅಧ್ಯಯನದಲ್ಲಿ ವಿಶೇಷ ಅಭಿರುಚಿ ಮೂಡಿಸಿದವರು ಪಂ.ಆಲೂರು ಶ್ರೀನಿವಾಸಾಚಾರ್ಯರು. ಟಿಪ್ಪಣಿಗಳ ಅಧ್ಯಯನ ಎಷ್ಟು ಆವಶ್ಯಕ, ಟಿಪ್ಪಣಿಗಳ ಅಧ್ಯಯನ ಹೇಗೆ ಮಾಡಬೇಕು, ಅನುವಾದ ಹೇಗೆ ಮಾಡಬೇಕು ಇತ್ಯಾದಿವಿಚಾರಗಳನ್ನು ಮನದಟ್ಟುಮಾಡಿಸಿ, ವ್ಯುತ್ಪತ್ತಿ ನೀಡಿದವರು ಅವರು. ಈ ನನ್ನ ಅನುವಾದವನ್ನು ಸಂಪೂರ್ಣವಾಗಿ ಅವಲೋಕಿಸಿ, ಸರಿ-ತಪ್ಪು ನಿರ್ಣಯ ನೀಡಿ, ಗ್ರಂಥಪ್ರಕಾಶನಕ್ಕೆ ವಿಶೇಷ ಅನುಗ್ರಹ ಮಾಡಿದ್ದಾರೆ. ಅವರಿಗೂ ನನ್ನ ಭಕ್ತಿಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಆದರೆ ಒಂದು ಮಾತು ಸತ್ಯ. ನಾನು ಪಂಡಿತನಲ್ಲ, ದೊಡ್ಡ ಅನುಭವಿಯೂ ಅಲ್ಲ. ಆದರೂ ಕೇವಲ ಶ್ರೀಗಳವರ ಅನುಗ್ರಹದಿಂದ, ಎಲ್ಲರ ಪ್ರೋತ್ಸಾಹದಿಂದ ನನ್ನ ಬುದ್ಧ್ಯನುಸಾರವಾಗಿ ಸಾಧ್ಯವಾದಷ್ಟು ಅನುವಾದ ಮಾಡಿದ್ದೇನೆ. ಸುಜನರು ಹಂಸಕ್ಷೀರನ್ಯಾಯದಿಂದ ದೋಷಗಳನ್ನು ನನಗೆ ಬಿಟ್ಟು, ಗುಣಗಳಿದ್ದರೆ ಅದು ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ ಪರಮಾಶೀರ್ವಾದ ಎಂದು ತಿಳಿಯಬೇಕು. ವಿದ್ವಾಂಸರು, ಜಿಜ್ಞಾಸುಗಳು, ವಿದ್ಯಾರ್ಥಿಗಳು ಈ ನನ್ನ ಅನುವಾದ ಗ್ರಂಥವನ್ನು ಓದಿ ಪ್ರೋತ್ಸಾಹಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ.

'अनेन भावि यत्पुण्यं तदाप्नोतु गुरुं मम'

ಗುರುಪಾದಸೇವಕ

**ಕಾಂತೇಶಾಚಾರ್ಯ ಕದರಮಂಡಲಗಿ**

# ಪ್ರಕಾಶಕರ ನುಡಿ

ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ **''ವಿಶ್ವಮಧ್ವಮಹಾಪರಿಷತ್''**

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ವದ ಗ್ರಂಥಗಳನ್ನು ಅನೇಕ ಟೀಕಾ-ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ **''ಮಾಯಾವಾದಖಂಡನ''** ಕನ್ನಡ ಅನುವಾದ ಗ್ರಂಥವು ವಿಶ್ವಮಧ್ವಮಹಾ-ಪರಿಷತ್ತಿನಿಂದ ಪ್ರಕಾಶಿತವಾಗುತ್ತಿದೆ. ಇದರ ಅನುವಾದ ಮಾಡಿದ ಪಂ. ಕಾಂತೇಶಾಚಾರ್ಯ ಕದರಮಂಡಲಗಿ ಇವರಿಗೆ, ಸುಂದರವಾಗಿ ಮುದ್ರಣ ಮಾಡಿದ ವಾಗರ್ಥಮುದ್ರಣಾಲಯದವರಿಗೆ ಧನ್ಯವಾದಗಳು.

**ಪ್ರಧಾನ ಕಾರ್ಯದರ್ಶಿಗಳು**
**ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ**
**ಬಸವನಗುಡಿ ಬೆಂಗಳೂರು - 4**

# ಮಾಯಾವಾದಖಂಡನಮ್

॥ ಹನುಮಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥

॥ ಶ್ರೀಗುರುಭ್ಯೋ ನಮಃ ॥

**ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।**
**ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥**

**ಅವತಾರಿಕೆ :-** ಸರ್ವಜ್ಞಕಲ್ಪರಾದ ಟೀಕಾಕಾರರಾದ ಶ್ರೀಮಜ್ಜಯತೀರ್ಥ ಶ್ರೀಚರಣರು ಶ್ರೀಮದಾನಂದತೀರ್ಥಭಗವತ್ಪಾದರಿಂದ ವಿರಚಿತವಾದ ''ಮಾಯಾವಾದಖಂಡನ'' ಎಂಬ ಪ್ರಕರಣಕ್ಕೆ ಟೀಕೆಯನ್ನು ರಚಿಸಲು ಇಚ್ಛಿಸಿದವರಾಗಿ, ತಾವು ಮಾಡಲು ಹೊರಟಿರುವ ಟೀಕಾಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲಿ ಎಂಬ ಉದ್ದೇಶದಿಂದ ಶ್ರೀನರಸಿಂಹದೇವರ ಸ್ತೋತ್ರರೂಪವಾದ ಮಂಗಲಾಚರಣೆಯನ್ನು ತಾವು ಮಾಡಿಕೊಂಡು, ಅಸನ್ನಿಹಿತರಾದ ಶಿಷ್ಯರಿಗೂ ಈ ಒಂದು ಶಿಕ್ಷಣ ಮಾಡುವುದಕ್ಕಾಗಿ (ಗ್ರಂಥ ಪ್ರಾರಂಭಿಸುವಾಗ ನಿರ್ವಿಘ್ನಪರಿಸಮಾಪ್ತಿ ಆಗುವುದಕ್ಕಾಗಿ ಎಲ್ಲರೂ ಪ್ರಾರಂಭದಲ್ಲಿ ಮಂಗಲಾಚರಣೆ ಮಾಡಬೇಕು ಎಂಬ ತತ್ತ್ವವನ್ನು ತಿಳಿಸುವುದಕ್ಕಾಗಿ) ತಾವು ಮಾಡಿದ ಮಂಗಲಾಚರಣೆಯನ್ನು ಗ್ರಂಥದಲ್ಲಿ ಉಪನಿಬಂಧನ ಮಾಡುವವರಾಗಿ, ತಾವು ಏನು ಮಾಡಲು ಹೊರಟಿದ್ದೇವೆ ಎನ್ನುವುದನ್ನು ಪ್ರತಿಜ್ಞೆ ಮಾಡುತ್ತಾರೆ -

**ಟೀಕಾ :-** **ನರಸಿಂಹಮಸಹ್ಯೋರುಪ್ರತ್ಯೂಹತಿಮಿರಾಪಹಮ್ ।**
**ಪ್ರಣಿಪತ್ಯ ವ್ಯಾಕರಿಷ್ಯೇ ಮಾಯಾವಾದಸ್ಯ ಖಂಡನಮ್ ॥**

**ಅನುವಾದ :-** ಅಸಹ್ಯೋರುಪ್ರತ್ಯೂಹತಿಮಿರಾಪಹಮ್, ಅಸಹ್ಯ=ಸಹಿಸಲು ಅಶಕ್ಯವಾದ (ಪ್ರಾರೀಪ್ಸಿತಪರಿಸಮಾಪ್ತಿರೂಪವಾದ ಇಷ್ಟಕ್ಕೆ ವಿರೋಧಿಯಾದ್ದರಿಂದ ಸಹಿಸಲು ಅಶಕ್ಯವಾದ) ಉರು=ಬಹುಸಂಖ್ಯಾಕವಾದ ಅಥವಾ ಅಲ್ಪಮಂಗಲದಿಂದ ಅನಿವರ್ತ್ಯವಾದ ಪ್ರತ್ಯೂಹ=ವಿಘ್ನಗಳೆಂಬ ತಿಮಿರ=ಕತ್ತಲೆಯನ್ನು (ವಿಘ್ನಗಳೂ ಸಹ ಸಮ್ಯಕ್‌ಜ್ಞಾನವಿರೋಧಿಯಾದ್ದರಿಂದ ಕತ್ತಲೆಯಂತೆ ಇವೆ ಎಂದು ಭಾವ) ಅಪಹಂ=ನಾಶ ಮಾಡುವ ನರಸಿಂಹಂ=ನರಸಿಂಹದೇವರನ್ನು ಪ್ರಣಿಪತ್ಯ=ನಮಸ್ಕರಿಸಿ, ಮಾಯಾವಾದಸ್ಯ ಖಂಡನಂ=ಶ್ರೀಮದಾನಾಂದತೀರ್ಥಭಗವತ್ಪಾದರಿಂದ ವಿರಚಿತವಾದ "**ಮಾಯಾವಾದಖಂಡನ**" ಎಂಬ ಪ್ರಕರಣವನ್ನು ವ್ಯಾಕರಿಷ್ಯೇ=ವ್ಯಾಖ್ಯಾನಿಸುತ್ತೇವೆ. (ಮಾಯಾವಾದಖಂಡನಗ್ರಂಥಕ್ಕೆ ಟೀಕೆಯನ್ನು ರಚಿಸುತ್ತೇವೆ.)

**ವಿವರಣೆ :-** ಯಾವುದೇ ಒಂದು ಗ್ರಂಥ ನಿರ್ವಿಘ್ನಪರಿಸಮಾಪ್ತಿಯಾಗಬೇಕಾದರೆ ಪ್ರಾರಂಭದಲ್ಲಿ ಮಂಗಲಾಚರಣೆ ಮಾಡಲೇಬೇಕು. ಕಾರಣ - ವಿಘ್ನಗಳು ಬರುವುದು ಪಾಪಗಳ ಮೂಲಕ. ಮಂಗಲಾಚರಣೆ ಮಾಡುವದರಿಂದ ಪಾಪಗಳ ಪರಿಹಾರವಾಗಿ ಆ ಮೂಲಕ ವಿಘ್ನಗಳೂ ಪರಿಹಾರವಾಗಿ ಪರಿಸಮಾಪ್ತವಾಗುತ್ತದೆ ಗ್ರಂಥ. ಈ ಹಿನ್ನೆಲೆಯಲ್ಲಿ ಆಚಾರ್ಯರ "ಮಾಯಾವಾದಖಂಡನ" ಗ್ರಂಥಕ್ಕೆ ಟೀಕಾಗ್ರಂಥವನ್ನು ರಚಿಸಲು ಹೊರಟ ಶ್ರೀಜಯತೀರ್ಥರು ಗ್ರಂಥದ ನಿರ್ವಿಘ್ನಪರಿಸಮಾಪ್ತಿಗಾಗಿ ಪ್ರಾರಂಭದಲ್ಲಿ ನರಸಿಂಹದೇವರ ಸ್ತೋತ್ರರೂಪವಾದ ಮಂಗಲಾಚರಣೆಯನ್ನು ಮಾಡಿದ್ದಾರೆ.

ಮಂಗಲಾಚರಣೆಯು ಅನೇಕವಿಧ :- 1. **ಕಾಯಿಕ** (ದೇಹದಿಂದ ಮಾಡುವ ನಮಸ್ಕಾರ) 2. **ವಾಚನಿಕ** (ಮಾತುಗಳಿಂದ ಮಾಡುವ ನಮಸ್ಕಾರ) 3. **ಮಾನಸಿಕ** (ಮನಸ್ಸಿನಲ್ಲಿ ಮಾಡುವ ನಮಸ್ಕಾರ) ಎಂದು. ಟೀಕಾಕೃತ್ಪಾದರು ನಿರ್ವಿಘ್ನಪರಿಸಮಾಪ್ತಿಗಾಗಿ ಈ ವಿಧವಾದ ಮಂಗಲಾಚರಣೆಯನ್ನು ತಾವು ಮಾಡಿಕೊಂಡು, ತಾವು ಮಾಡಿದ ಮಂಗಲಾಚರಣೆಯನ್ನು ಗ್ರಂಥದಲ್ಲಿ ಉಪನಿಬಂಧನ ಮಾಡುತ್ತಿದ್ದಾರೆ. ಅದರ ಉದ್ದೇಶ ಇಷ್ಟೇ :- ಟೀಕಾಕೃತ್ಪಾದರು ವಾಚನಿಕವಾದ ಅಥವಾ ಕಾಯಿಕವಾದ ಮಂಗಲಾಚರಣೆಯನ್ನು ಮಾತ್ರ ಮಾಡಿದ್ದೇ ಆಗಿದ್ದರೆ ಸನ್ನಿಹಿತರಾದ ಶಿಷ್ಯರಿಗೆ (ಎದುರಿಗೆ ಕುಳಿತಿದ್ದ ಶಿಷ್ಯರಿಗೆ) ಮಾತ್ರ "ನಿರ್ವಿಘ್ನಪರಿಸಮಾಪ್ತಿಗಾಗಿ ಗ್ರಂಥದ ಪ್ರಾರಂಭದಲ್ಲಿ ಮಂಗಲಾಚರಣೆ ಮಾಡಬೇಕು" ಎಂಬ ತತ್ತ್ವ ತಿಳಿಯುತ್ತಿತ್ತು. ಆದರೆ ಅಸನ್ನಿಹಿತರಾದ ಶಿಷ್ಯರಿಗೆ (ಆ ಕಾಲದಲ್ಲಿ ಇಲ್ಲದ ಶಿಷ್ಯರಿಗೆ) ಈ ತತ್ತ್ವ ತಿಳಿಯುತ್ತಿರಲಿಲ್ಲ. ಅಂತಹ

ಅಸನ್ನಿಹಿತರಾದ ಶಿಷ್ಯರಿಗೂ ಈ ಒಂದು ತತ್ತ್ವವನ್ನು ತಿಳಿಸುವುದಕ್ಕಾಗಿ (ಶಿಕ್ಷಣ ನೀಡುವುದಕ್ಕಾಗಿ) ತಾವು ಕಾಯಿಕ-ವಾಚನಿಕ-ಮಾನಸಿಕವಾಗಿ ಮಾಡಿದ ಮಂಗಲಾಚರಣೆಯನ್ನು ಗ್ರಂಥದಲ್ಲಿ ಉಪನಿಬಂಧನ ಮಾಡುತ್ತಿದ್ದಾರೆ.

ಗ್ರಂಥದಲ್ಲಿ ಉಪನಿಬಂಧನ ಮಾಡಿದಾಗ, ಗ್ರಂಥವನ್ನು ಓದುವ ಅಸನ್ನಿಹಿತ ಶಿಷ್ಯರು ''ಟೀಕಾಕೃತ್ಪಾದರು ನಿರ್ವಿಘ್ನಪರಿಸಮಾಪ್ತಿಗಾಗಿ ಗ್ರಂಥದ ಪ್ರಾರಂಭದಲ್ಲಿ ಮಂಗಲಾಚರಣೆ ಮಾಡಿದ್ದಾರೆ ಎಂದಮೇಲೆ ನಾವೂ ಸಹ ನಿರ್ವಿಘ್ನಪರಿಸಮಾಪ್ತಿಗಾಗಿ ಗ್ರಂಥದ ಪ್ರಾರಂಭದಲ್ಲಿ ಮಂಗಲಾಚರಣೆ ಮಾಡಬೇಕು'' ಎಂದು ಮನಗಾಣುತ್ತಾರೆ ಎಂದು ಭಾವ.

**ನರಸಿಂಹದೇವರನ್ನೇ ಏಕೆ ನಮಿಸಿದ್ದಾರೆ ?**

ಮಂಗಲಾಚರಣೆ ಎಂದರೆ ಇಷ್ಟದೇವತಾನಮನ. ಅಂದಮೇಲೆ ರಾಮ-ಕೃಷ್ಣಾದಿ ಅನೇಕ ರೂಪಗಳನ್ನು ನಮಸ್ಕರಿಸಲು ಬರುವಾಗ ಟೀಕಾಕೃತ್ಪಾದರು ನರಸಿಂಹದೇವರನ್ನೇ ಏಕೆ ನಮಸಿದ್ದಾರೆ ? ನರಸಿಂಹನಮನದಲ್ಲಿ ಅಂತಹ ವಿಶೇಷವೇನಿದೆ ?

ನಿಜವೇ. ''ನೇಹ ನಾನಾಽಸ್ತಿ ಕಿಂಚನ'' ಎಂಬುದಾಗಿ ಶ್ರುತಿಯು ಹೇಳುವಂತೆ ಭಗವಂತನ ರೂಪಗಳಲ್ಲಿ ಯಾವ ಭೇದವೂ ಇಲ್ಲ. ಆದರೂ ಸಹ 'ವಿಶೇಷ'ಬಲದಿಂದ ಒಂದೊಂದು ರೂಪದಲ್ಲಿ ಒಂದೊಂದು ವೈಶಿಷ್ಟ್ಯವಿದೆ. ಉದಾ :- ಜ್ಞಾನಕಾರ್ಯದಲ್ಲಿ ವೇದವ್ಯಾಸರನ್ನು ಅಥವಾ ಹಯಗ್ರೀವಾದಿಗಳನ್ನು ವಿಶೇಷವಾಗಿ ನಮಿಸುತ್ತೇವೆ. ಬಲಕಾರ್ಯದಲ್ಲಿ ರಾಮ-ಕೃಷ್ಣಾದಿಗಳನ್ನು ವಿಶೇಷವಾಗಿ ನಮಿಸುವುದುಂಟು. ಆದರಂತೆ

**''ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ'' ।**

ಎಂಬುದಾಗಿ ಆಚಾರ್ಯರೇ ಅಪ್ಪಣೆ ನೀಡಿದಂತೆ ವಿಘ್ನಗಳ ಪರಿಹಾರಕ್ಕಾಗಿ ನರಸಿಂಹದೇವರ ಉಪಾಸನೆ-ನಮಸ್ಕಾರಾದಿಗಳು ವಿಶೇಷವಾಗಿ ವಿಹಿತವಾಗಿವೆ. ಪ್ರಕೃತದಲ್ಲಿ ''ವಿಘ್ನಪರಿಹಾರ'' ಎಂಬ ಪ್ರಯೋಜನದ ಅಪೇಕ್ಷೆ ಇರುವುದರಿಂದ ಟೀಕಾಕೃತ್ಪಾದರು ನರಸಿಂಹದೇವರ ನಮಸ್ಕಾರವನ್ನು ಮಾಡಿ ನಿರ್ವಿಘ್ನಪರಿಸಮಾಪ್ತಿಯನ್ನು ಪ್ರಾರ್ಥಿಸಿದ್ದಾರೆ ಎನ್ನುವುದು ವಿಶೇಷ.

**ಅವತಾರಿಕೆ :-** ಶ್ರೀಮದಾಚಾರ್ಯರು ರಚಿಸಿರುವ ''ಮಾಯಾವಾದಖಂಡನ'' ಎಂಬ ಪ್ರಕರಣವು ವಿಷಯ-ಪ್ರಯೋಜನಾದಿಗಳಿಂದ ರಹಿತವಾದ್ದರಿಂದ ವ್ಯಾಕರ್ತವ್ಯವಾಗಿಲ್ಲ (ವ್ಯಾಖ್ಯಾನಿಸಲು ಯೋಗ್ಯವಾಗಿಲ್ಲ) ಎಂದು ಶಂಕೆ ಬಂದರೆ,

ಅದಕ್ಕಾಗಿ ಪ್ರಕರಣಗ್ರಂಥಕ್ಕೆ ವಿಷಯ-ಪ್ರಯೋಜನಾದಿಗಳನ್ನು ಸಮರ್ಥಿಸುತ್ತಾರೆ 'ಇಹ ಹಿ' ಇತ್ಯಾದಿ ವಾಕ್ಯಗಳಿಂದ -

**ಟೀಕಾ :- [1]ಇಹ ಹಿ ವಿವಿಧಸಾಂಸಾರಿಕದುಃಖದರ್ಶನೇನ ವಿರಕ್ತಸ್ಯ [2]ಶಮದಮಾದಿಮತೋ ಮುಮುಕ್ಷೋರಧಿಕಾರಿಣಸ್ತನ್ನಿವೃತ್ತ್ಯೈ[3] [4]ಪರಮಾನಂದಾವಾಪ್ತ್ಯೈ ಚ ಸಕಲಜೀವಜಡಾತ್ಮಕಾತ್ ಪ್ರಪಂಚಾತ್ ಪರಮಾರ್ಥತ ಏವಾತ್ಯಂತಭಿನ್ನಂ ನಿಖಿಲಗುಣೋದಾರಂ ನಿರಸ್ತಸಮಸ್ತದೋಷಂ ಪರಬ್ರಹ್ಮ ಪ್ರತಿಪಾದಯಿತುಂ ಸಕಲಶ್ರುತಿಸ್ಮೃತೀನಾಂ [5]ತದುಪಕರಣಭೂತಬ್ರಹ್ಮಮೀಮಾಂಸಾಯಾಶ್ಚ ಪ್ರವೃತ್ತಿರಿತಿ ತತ್ತ್ವಮ್ ॥**

**ಅನುವಾದ :-** ಈ ಅಧಿಕಾರಿ-ಅನಧಿಕಾರಿಗಳ ವರ್ಗದಲ್ಲಿ ವಿವಿಧಸಾಂಸಾರಿಕ ದುಃಖದರ್ಶನದಿಂದ (ಅನೇಕವಿಧ ಸಾಂಸಾರಿಕದುಃಖಗಳ ಅನುಭವದಿಂದ) ವಿರಕ್ತನಾದ, ಶಮ-ದಮಾದಿಗಳನ್ನು ಸಂಪಾದಿಸಿದ, ಮುಮುಕ್ಷುವಾದ ಅಧಿಕಾರಿಗೆ ಆ ವಿವಿಧಸಾಂಸಾರಿಕದುಃಖಗಳ ನಿವೃತ್ತಿಗಾಗಿ ಮತ್ತು ಪರಮಾನಂದದ ಪ್ರಾಪ್ತಿಗಾಗಿ, ಅರ್ಥಾತ್ ಮೋಕ್ಷವನ್ನು ತಂದುಕೊಡುವುದಕ್ಕಾಗಿ ಸಕಲಜೀವಜಡಾತ್ಮಕವಾದ ಪ್ರಪಂಚದಿಂದ ಪಾರಮಾರ್ಥಿಕವಾಗಿಯೇ ಅತ್ಯಂತಭಿನ್ನನಾದ, ಸಕಲಗುಣ-ಪರಿಪೂರ್ಣನಾದ, ಸಮಸ್ತದೋಷದೂರನಾದ ಪರಬ್ರಹ್ಮನನ್ನು ಪ್ರತಿಪಾದಿಸುವುದಕ್ಕಾಗಿ

---

1) ಇಹ ಅಧಿಕಾರ್ಯನಧಿಕಾರಿವರ್ಗೇ, ಅಧಿಕಾರಿಣ ಇತ್ಯನ್ವಯಃ । (ಶ್ರೀನಿ)

2) ಶಮೋ ಭಗವನ್ನಿಷ್ಠಬುದ್ಧಿಮತ್ತ್ವಂ, ದಮ ಇಂದ್ರಿಯನಿಗ್ರಹಃ । ''ಶಮೋ ಮನ್ನಿಷ್ಠತಾ ಬುದ್ಧಿರ್ದಮ ಇಂದ್ರಿಯನಿಗ್ರಹಃ'' ಇತಿ ಭಗವದ್ವಚನಾತ್ । ಆದಿಪದೇನ ''ಶಾಂತೋ ದಾಂತ ಉಪರತಸ್ತಿತಿಕ್ಷುಃ'' ಇತ್ಯಾದಿಶ್ರುತ್ಯುಕ್ತ ವಿಷಯಾಲಂಬುದ್ಧಿಮತ್ತ್ವಾದಿರೂಪೋ-ಪರತತ್ವಾದಿಸಂಗ್ರಹಃ । (ಶ್ರೀನಿ)

3) ಸಾಂಸಾರಿಕದುಃಖನಿವೃತ್ತ್ಯೈ ।

4) ಆನಂದಸ್ಯ ಪರಮತ್ವಂ ನಾಮ ದುಃಖಾಸಂಭಿನ್ನತ್ವಂ ನಿತ್ಯತ್ವಂ ವೇತಿ ದ್ರಷ್ಟವ್ಯಮ್ । ತಥಾ ಚ ಆತ್ಯಂತಿಕದುಃಖನಿವೃತ್ತಿವಿಶಿಷ್ಟಪರಮಾನಂದಾವಿರ್ಭಾವ ಏವ ಮೋಕ್ಷ ಇತ್ಯುಕ್ತಂ ಭವತಿ । (ಶ್ರೀನಿ)

5) ಶ್ರುತ್ಯರ್ಥನಿರ್ಣಾಯಕನ್ಯಾಯಗ್ರಥನಾತ್ಮಿಕಾಯಾ ಇತ್ಯರ್ಥಃ । ''ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ । ಇತಿಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತೀ''ತಿ ವಚನಾದಿತಿ ದ್ರಷ್ಟವ್ಯಮ್ । (ಶ್ರೀನಿ)

ಸಕಲಶ್ರುತಿ-ಸ್ಮೃತಿಗಳ ಹಾಗೂ ತದುಪಕರಣಭೂತವಾದ (ಶ್ರುತ್ಯರ್ಥನಿರ್ಣಾಯಕ ನ್ಯಾಯಗ್ರಥನಾತ್ಮಕವಾದ) ಬ್ರಹ್ಮಮೀಮಾಂಸಾಶಾಸ್ತ್ರದ ಪ್ರವೃತ್ತಿ ಆಗಿದೆ ಎನ್ನುವುದು ತತ್ತ್ವ.

**ವಿವರಣೆ :-** ಯಾವುದೇ ಒಂದು ಗ್ರಂಥ ವ್ಯಾಕರ್ತವ್ಯ (ವ್ಯಾಖ್ಯಾನ ಮಾಡಲು ಯೋಗ್ಯ) ಎಂದಾಗಬೇಕಾದರೆ ಆ ಗ್ರಂಥಕ್ಕೆ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧ ಎಂಬ ಅನುಬಂಧಚತುಷ್ಟಯ ಇರಲೇಬೇಕು. ಪ್ರಕೃತದಲ್ಲಿ ಶ್ರೀಮದಾಚಾರ್ಯರು ರಚಿಸಿರುವ 'ಮಾಯಾವಾದಖಂಡನ' ಎಂಬ ಪ್ರಕರಣವೂ ಅಧಿಕಾರ್ಯಾದಿ ಅನುಬಂಧಚತುಷ್ಟಯ ಉಳ್ಳದ್ದಾಗಿದ್ದರೆ ಆಗ ಅದು ವ್ಯಾಕರ್ತವ್ಯವಾಗುತ್ತಿತ್ತು. ಆದರೆ ಈ ಗ್ರಂಥಕ್ಕೆ ಅಧಿಕಾರ್ಯಾದಿ ಅನುಬಂಧಚತುಷ್ಟಯವಿಲ್ಲದ ಕಾರಣ ಇದು ವ್ಯಾಕರ್ತವ್ಯವೇ ಆಗಿಲ್ಲ. ಅಂದರೆ ಅಂತಹ ಗ್ರಂಥವನ್ನು ನೀವು ವ್ಯಾಖ್ಯಾನಿಸಲು ಹೊರಟಿರುವುದು ಸಮಂಜಸವಲ್ಲ ಎಂಬುದಾಗಿ ಶಂಕೆ ಬಂದರೆ, ಇದಕ್ಕೆ ಉತ್ತರರೂಪವಾಗಿ ''ಆಚಾರ್ಯರ ಈ ಗ್ರಂಥವು ಪ್ರಕರಣವಾಗಿದೆ. ಪ್ರಕರಣವು ಶಾಸ್ತ್ರೈಕದೇಶಸಂಬಂಧಿಯಾಗಿರುತ್ತದೆ. ಹೀಗಾಗಿ ಶಾಸ್ತ್ರಕ್ಕೆ ಯಾವ ವಿಷಯಾದಿಗಳು ನಿರೂಪಿತವಾಗಿವೆಯೋ ಅದೇ ವಿಷಯಾದಿಗಳೇ ನಮ್ಮ ಪ್ರಕರಣಗ್ರಂಥಕ್ಕೂ ಸಂಬಂಧಿಸಿವೆ. ಆದ್ದರಿಂದ ಆಚಾರ್ಯರ ಗ್ರಂಥವು ವ್ಯಾಕರ್ತವ್ಯವೇ ಆಗಿದೆ'' ಎಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದಾರೆ ಟೀಕಾಕೃತ್ಪಾದರು.

ಹಾಗಾದರೆ ಶಾಸ್ತ್ರಕ್ಕೆ ನಿರೂಪಿತವಾದ ಆ ವಿಷಯಾದಿಗಳು ಯಾವುವು ? ಎಂದು ಪ್ರಶ್ನೆ ಬಂದರೆ, ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಪರಾಭಿಪ್ರೇತವಾದ (ಪರರು ಹೇಳುವ) ವಿಷಯಾದಿಗಳನ್ನು ನಿರಾಕರಿಸುವ ಮೂಲಕ ಸ್ವಾಭಿಪ್ರೇತವಾದ ವಿಷಯಾದಿಗಳನ್ನು ಸಮರ್ಥಿಸುವುದಕ್ಕಾಗಿ ಈ ಪ್ರಕರಣ ಪ್ರವೃತ್ತವಾಗಿದೆ ಎಂಬ ಅಭಿಪ್ರಾಯದಿಂದ, ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಸ್ವಾಭಿಪ್ರೇತವಾದ (ನಾವು ಹೇಳುವ) ವಿಷಯಾದಿಗಳನ್ನು ಮೊದಲಿಗೆ ತೋರಿಸುತ್ತಾರೆ 'ಇಹ ಹಿ' ಇತ್ಯಾದಿ ವಾಕ್ಯಗಳಿಂದ.

**ಅಧಿಕಾರಿ ಯಾರು ?**

ಅಧಿಕಾರಿ ಎಂದು ಯಾರನ್ನು ಕರೆಯಬೇಕು ? ಎಂದು ಶಂಕೆ ಬಂದರೆ, ನಿತ್ಯಾನಿತ್ಯವಸ್ತುವಿವೇಕ-ವೈರಾಗ್ಯ-ಶಮದಮಾದಿಸಂಪತ್ತಿ-ಮುಮುಕ್ಷಾ ಎಂಬ ಸಾಧನಚತುಷ್ಟಯಗಳಿಂದ ಸಂಪನ್ನನಾದವನೇ ಅಧಿಕಾರಿ ಎಂಬುದನ್ನು ತಿಳಿಸುತ್ತಾರೆ :- ''ವಿವಿಧಸಾಂಸಾರಿಕದುಃಖದರ್ಶನೇನ ವಿರಕ್ತಸ್ಯ ಶಮದಮಾದಿಮತೋ ಮುಮುಕ್ಷೋಃ ಅಧಿಕಾರಿಣಃ ''ಎಂಬ ಪದಗಳಿಂದ. ಇಲ್ಲಿ 'ವಿವಿಧಸಾಂಸಾರಿಕದುಃಖದರ್ಶನೇನ' ಎಂಬ

ಪದದಿಂದ ನಿತ್ಯಾನಿತ್ಯವಸ್ತುವಿವೇಕವು ಅಭಿಪ್ರೇತವಾಗಿದೆ. (ದುಃಖದರ್ಶನೇನ ವಿರಕ್ತಸ್ಯ ಎಂದು ಹೇಳುವುದರಿಂದ ನಿತ್ಯಾನಿತ್ಯವಸ್ತುವಿವೇಕಕ್ಕೆ ವೈರಾಗ್ಯಸಾಧನತ್ವವು ಸೂಚಿತವಾಗುತ್ತಿದೆ.) 'ವಿರಕ್ತಸ್ಯ' ಎಂಬ ಪದದಿಂದ ವೈರಾಗ್ಯವನ್ನು, 'ಶಮದಮಾದಿಮತಃ' ಎಂಬ ಪದದಿಂದ ಶಮದಮಾದಿಸಂಪತ್ತಿಯನ್ನು, 'ಮುಮುಕ್ಷೋಃ' ಎಂಬ ಪದದಿಂದ ಮುಮುಕ್ಷಾವನ್ನು ತಿಳಿಸುತ್ತಿದ್ದಾರೆ. ಒಟ್ಟಿನಲ್ಲಿ ''ನಿತ್ಯಾನಿತ್ಯವಸ್ತುವಿವೇಕ-ವೈರಾಗ್ಯ-ಶಮದಮಾದಿಸಂಪತ್ತಿ-ಮುಮುಕ್ಷಾ ಎಂಬ ಸಾಧನಚತುಷ್ಟಯ ಉಳ್ಳವನೇ ಅಧಿಕಾರಿ'' ಎಂಬ ಪ್ರಮೇಯವನ್ನು ಟೀಕಾಕೃತ್ಪಾದರು ಇಲ್ಲಿ ತಿಳಿಸುತ್ತಿದ್ದಾರೆ.

**ಸ್ವಮತದಲ್ಲಿ ಮೋಕ್ಷಸ್ವರೂಪ**

ಮೋಕ್ಷಸ್ವರೂಪವಿಚಾರದಲ್ಲಿ ವಾದಿಗಳಲ್ಲಿ ಪರಸ್ಪರ ವಿಪ್ರತಿಪತ್ತಿ ಇರುವುದರಿಂದ ಸ್ವಮತದಲ್ಲಿ ಮೋಕ್ಷಸ್ವರೂಪವನ್ನು ನಿರೂಪಿಸುವುದಕ್ಕಾಗಿ ''ತನ್ನಿವೃತ್ತ್ಯೈ ಪರಮಾನಂದಾವಾಪ್ತ್ಯೈ ಚ'' ಎಂದಿದ್ದಾರೆ. ಸ್ವಮತದಲ್ಲಿ ಅನಿಷ್ಟನಿವೃತ್ತಿ ಹಾಗೂ ಇಷ್ಟಪ್ರಾಪ್ತಿ ಎಂಬುದಾಗಿ ಮೋಕ್ಷವು ದ್ವಿದಳಾತ್ಮಕವಾಗಿದೆ. ಇದರಲ್ಲಿ ಸಾಂಸಾರಿಕ ದುಃಖನಿವೃತ್ತಿಯು ಅನಿಷ್ಟನಿವೃತ್ತಿರೂಪವಾದರೆ, ಸ್ವರೂಪಾನಂದಾವಿರ್ಭಾವವು ಇಷ್ಟಪ್ರಾಪ್ತಿರೂಪವಾಗಿದೆ. ಹಾಗಾಗಿ ಸಾಂಸಾರಿಕದುಃಖನಿವೃತ್ತಿಯಿಂದ ವಿಶಿಷ್ಟವಾದ ಸ್ವರೂಪಾನಂದದ ಆವಿರ್ಭಾವವೇ ಮೋಕ್ಷ ಎಂದು ಇಲ್ಲಿ ತಿಳಿಸುತ್ತಿದ್ದಾರೆ. ಪರಮಾನಂದ ಎಂದರೆ ದುಃಖಾಸಂಭಿನ್ನವಾದ (ದುಃಖರಹಿತವಾದ) ಆನಂದ ಅಥವಾ ನಿತ್ಯವಾದ ಆನಂದ ಎಂದರ್ಥ. ಹಾಗಾದರೆ ''ಆತ್ಯಂತಿಕದುಃಖನಿವೃತ್ತಿವಿಶಿಷ್ಟವಾದ ಪರಮಾನಂದದ ಆವಿರ್ಭಾವವೇ ಮೋಕ್ಷ'' ಎಂದು ಹೇಳಿದಂತಾಗುತ್ತದೆ.

**'ಪ್ರಪಂಚಾತ್ ಪರಮಾರ್ಥತ ಏವ ಅತ್ಯಂತಭಿನ್ನಂ' - ದಳಕೃತ್ಯ**

**ಕೃತ್ಯ-1)** ಇಲ್ಲಿ ಕೇವಲ 'ಪ್ರಪಂಚಾತ್ ಭಿನ್ನಂ' ಎಂದಷ್ಟೇ ಹೇಳಿದರೆ, ಮಾಯಾವಾದಿಗಳೂ ಸಹ ಬ್ರಹ್ಮನಿಗೆ ಪ್ರಪಂಚದಿಂದ ವ್ಯಾವಹಾರಿಕಭೇದವನ್ನು ಅಂಗೀಕರಿಸಿದ್ದರಿಂದ ಅಂತಹ ವ್ಯಾವಹಾರಿಕಭೇದವಿಶಿಷ್ಟನಾದ ಬ್ರಹ್ಮನು ಸ್ವಮತದಲ್ಲಿ ವಿಷಯನಾಗಬೇಕಾದ ಅತಿಪ್ರಸಂಗ ಬರುತ್ತದೆ. ಆ ಅತಿಪ್ರಸಂಗದ ಪರಿಹಾರಕ್ಕಾಗಿ 'ಪರಮಾರ್ಥತಃ ಭಿನ್ನಂ' ಎಂದು ಹೇಳಿದ್ದಾರೆ. ಅದರರ್ಥ ಪಾರಮಾರ್ಥಿಕಭೇದ-ವಿಶಿಷ್ಟನಾದವನು ಎಂದು. ಹೀಗಾಗಿ ಪ್ರಪಂಚದಿಂದ ಪಾರಮಾರ್ಥಿಕಭೇದವಿಶಿಷ್ಟನಾದ ಬ್ರಹ್ಮನು ವಿಷಯನೇ ಹೊರತು ವ್ಯಾವಹಾರಿಕಭೇದವಿಶಿಷ್ಟನಾದ ಬ್ರಹ್ಮ ವಿಷಯನಲ್ಲ.

**ಕೃತ್ಯ-2)** ಭೇದಾಭೇದವಾದಿಗಳು ಮೂರು ವಿಧರಾಗಿದ್ದಾರೆ. 1) ಸಂಸಾರಾವಸ್ಥೆಯಲ್ಲಿ ಜೀವ-ಬ್ರಹ್ಮರಿಗೆ ಕೇವಲ ಭೇದವಿರುತ್ತದೆ. ಮೋಕ್ಷದಲ್ಲಿ ಮಾತ್ರ ಅಭೇದವಿರುತ್ತದೆ ಎಂದು ಕೆಲವರು ಹೇಳುತ್ತಾರೆ. 2) ಮತ್ತೆ ಕೆಲವರು ಸಂಸಾರದಲ್ಲಿ ಭೇದಾಭೇದಗಳು ಇರುತ್ತವೆ. ಮೋಕ್ಷದಲ್ಲಿ ಮಾತ್ರ ಕೇವಲ ಅಭೇದ ಇರುತ್ತದೆ ಎಂದು ಹೇಳುತ್ತಾರೆ. 3) ಇನ್ನು ಕೆಲವರು ಸಂಸಾರದಲ್ಲಿ ಹಾಗೂ ಮೋಕ್ಷದಲ್ಲಿ ಎರಡು ಕಡೆಯಲ್ಲಿಯೂ ಸಹ ಭೇದಾಭೇದಗಳೇ ಇರುತ್ತವೆ ಎಂದು ಹೇಳುತ್ತಾರೆ.

ಈ ಮೂರು ಮತಗಳಲ್ಲಿಯೂ ಸಹ ಅಂಗೀಕೃತವಾದ ಭೇದವು ಸತ್ಯೋಪಾಧಿ ಕೃತವಾಗಿದೆ, ಪಾರಮಾರ್ಥಿಕವೇ ಆಗಿದೆ. ಈ ಮತಗಳಲ್ಲಿ ಸಂಸಾರಾವಸ್ಥೆಯಲ್ಲಿ ಪಾರಮಾರ್ಥಿಕವಾಗಿ ಅತ್ಯಂತಭೇದವನ್ನೂ ಕೆಲವು ಭೇದಾಭೇದವಾದಿಗಳು ಅಂಗೀಕರಿಸಿದ್ದರಿಂದ, ಅಂತಹ ಭೇದವನ್ನು (ಸಂಸಾರದಲ್ಲಿ ಮಾತ್ರ ಅಂಗೀಕರಿಸುವ ಪಾರಮಾರ್ಥಿಕಭೇದವನ್ನು) ವ್ಯಾವರ್ತನಗೊಳಿಸುವುದಕ್ಕಾಗಿ 'ಏವ' ಎಂದಿದ್ದಾರೆ. ಸರ್ವದಾ (ಸಂಸಾರದಲ್ಲಿ ಹಾಗೂ ಮೋಕ್ಷದಲ್ಲಿ ಹೀಗೆ ಯಾವಾಗಲೂ) ಎನ್ನುವುದು ಆ ಏವಕಾರದ ಅರ್ಥ. ಈ ಮೂರು ಮತಗಳಲ್ಲಿ ಜೀವ-ಬ್ರಹ್ಮರ ನಡುವೆ ಸಂಸಾರದಲ್ಲಿ ಪಾರಮಾರ್ಥಿಕಭೇದವನ್ನು ಅಂಗೀಕರಿಸಿದರೂ ಸಹ, ಸಂಸಾರದಲ್ಲಿ ಹಾಗೂ ಮೋಕ್ಷದಲ್ಲಿ ಯಾವಾಗಲೂ ಪಾರಮಾರ್ಥಿಕಭೇದವನ್ನು ಅಂಗೀಕರಿಸಿಲ್ಲವಾದ್ದರಿಂದ, ಭೇದಾಭೇದವಾದಿಗಳು ಒಪ್ಪುವ ಅಂತಹ ಪಾರಮಾರ್ಥಿಕಭೇದವನ್ನು ಏವಕಾರದಿಂದ ವ್ಯಾವರ್ತನಗೊಳಿಸಿದಂತಾಗುತ್ತದೆ.

**ಕೃತ್ಯ-3)** ಸಂಸಾರದಲ್ಲಿ ಹಾಗೂ ಮೋಕ್ಷದಲ್ಲಿ ಭೇದಾಭೇದವೇ ಇದೆ ಎಂದು ಭಾಸ್ಕರಾಚಾರ್ಯ ಏಕದೇಶಿಮತವು ಹೇಳುತ್ತದೆ. ಅದನ್ನು ವ್ಯಾವರ್ತನಗೊಳಿಸುವುದಕ್ಕಾಗಿ ''ಅತ್ಯಂತಭಿನ್ನಂ'' ಎಂಬುದಾಗಿ 'ಅತ್ಯಂತ' ಎಂಬ ವಿಶೇಷಣವನ್ನು ಭೇದಕ್ಕೆ ಕೊಟ್ಟಿದ್ದಾರೆ. ಈ ರೀತಿಯಾಗಿ 'ಪರಮಾರ್ಥತಃ' 'ಏವ' 'ಅತ್ಯಂತ' ಎಂಬ ಪದಗಳಿಗೆ ಸಾರ್ಥಕತೆಯನ್ನು ತಿಳಿಯಬೇಕಿದೆ.

**ಅಧಿಕಾರ್ಯಾದಿ ಅನುಬಂಧ ಚತುಷ್ಟಯಗಳು**

'ಇಹ ಹಿ' ಇತ್ಯಾದಿಯಾಗಿ 'ಪ್ರವೃತ್ತಿರಿತಿ ತತ್ತ್ವಮ್' ಇತ್ಯಂತವಾದ ವಾಕ್ಯಗಳಿಂದ ಟೀಕಾಕೃತ್ಪಾದರು ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಸ್ವಮತರೀತ್ಯಾ ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧಗಳನ್ನು ತಿಳಿಸುತ್ತಿದ್ದಾರೆ.

**ವಿಷಯ :-** ಸಕಲಜೀವಜಡಾತ್ಮಕವಾದ ಪ್ರಪಂಚದಿಂದ ಪಾರಮಾರ್ಥಿಕವಾಗಿ ಅತ್ಯಂತಭಿನ್ನನಾದ, ಸಕಲಗುಣಪರಿಪೂರ್ಣನಾದ, ಸರ್ವದೋಷದೂರನಾದ ಪರಬ್ರಹ್ಮನೇ ವಿಷಯ.

**ಪ್ರಯೋಜನ :-** ಸಾಂಸಾರಿಕದುಃಖನಿವೃತ್ತಿಯಿಂದ ವಿಶಿಷ್ಟವಾದ ಪರಮಾನಂದದ ಪ್ರಾಪ್ತಿಯೆಂಬ ಮೋಕ್ಷವೇ (ಆತ್ಯಂತಿಕದುಃಖನಿವೃತ್ತಿವಿಶಿಷ್ಟಸ್ವರೂಪಾನಂದಾವಿರ್ಭಾವ ಎಂಬ ಮೋಕ್ಷವೇ) ಪ್ರಯೋಜನ.

**ಅಧಿಕಾರಿ :-** ನಿತ್ಯಾನಿತ್ಯವಸ್ತುವಿವೇಕ-ವೈರಾಗ್ಯ-ಶಮದಮಾದಿಸಂಪತ್ತಿ-ಮುಮುಕ್ಷಾ ಎಂಬ ಸಾಧನಚತುಷ್ಟಯಗಳಿಂದ ಸಂಪನ್ನನಾದವನೇ ಅಧಿಕಾರಿ.

**ಸಂಬಂಧ :-** ಯಥಾಯೋಗ್ಯವಾಗಿ ಸಂಬಂಧ -

ಅಧಿಕಾರಿ-ವಿಷಯಗಳಿಗೆ ಜ್ಞಾತೃ-ಜ್ಞೇಯಭಾವ ಸಂಬಂಧ.

ಅಧಿಕಾರಿ-ಪ್ರಯೋಜನಗಳಿಗೆ ಪ್ರಾಪ್ತೃ-ಪ್ರಾಪ್ಯಭಾವ ಸಂಬಂಧ.

ಪ್ರಯೋಜನ-ವಿಷಯಗಳಿಗೆ ಪ್ರಾಪ್ಯ-ಪ್ರಾಪಕಭಾವ ಸಂಬಂಧ.

ಈ ರೀತಿಯಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಅಧಿಕಾರ್ಯಾದಿ ಅನುಬಂಧಚತುಷ್ಟಯ ಇರುವುದರಿಂದ, ಅದೇ ಅಧಿಕಾರ್ಯಾದಿ ಅನುಬಂಧಚತುಷ್ಟಯವೇ ಶಾಸ್ತ್ರೈಕದೇಶಿಯಾದ ಈ ಪ್ರಕರಣಗ್ರಂಥಕ್ಕೂ ಇರುವುದರಿಂದ, ಆಚಾರ್ಯರು ರಚಿಸಿರುವ ''ಮಾಯಾವಾದಖಂಡನ'' ಎಂಬ ಗ್ರಂಥವು ವ್ಯಾಕರ್ತವ್ಯವೇ ಆಗಿದೆ ಅಂದರೆ ಅದನ್ನು ವ್ಯಾಖ್ಯಾನಿಸಲು ಹೊರಟಿರುವುದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ಈ ರೀತಿಯಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಸ್ವಾಭಿಪ್ರೇತವಾದ ವಿಷಯಾದಿಗಳನ್ನು ನಿರೂಪಿಸಿ, ಮುಂದೆ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಪರಾಭಿಪ್ರೇತವಾದ (ಪರರು ಹೇಳುವ) ವಿಷಯಾದಿಗಳನ್ನು ನಿರೂಪಿಸುತ್ತಾರೆ -

**ಟೀಕಾ :- ಅಪರೇ ತು ''ಸ್ವತಃ ಪರಬ್ರಹ್ಮಭೂತಸ್ಯೈವ ಜೀವಸ್ಯ ಅಜ್ಞಾನ-ನಿಮಿತ್ತಂ ದುಃಖಾದಿ । ತದದ್ವೈತಜ್ಞಾನನಿವರ್ತನೀಯಮಿತ್ಯತೋಽನರ್ಥ-ಹೇತೋರಸ್ಯ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವಶಾಸ್ತ್ರಾರಂಭಃ'' ಇತಿ ವರ್ಣಯಂತಿ ।**

**ಅನುವಾದ :-** ಇನ್ನು ಮಾಯಾವಾದಿಗಳು - ''ಜೀವನು ಸ್ವಾಭಾವಿಕವಾಗಿಯೇ ಪರಬ್ರಹ್ಮನಿಂದ ಅಭಿನ್ನನಾಗಿದ್ದಾನೆ. ಅಂತಹ ಬ್ರಹ್ಮನಿಂದ ಅಭಿನ್ನನಾದ ಜೀವನಿಗೆ ಐಕ್ಯಾಜ್ಞಾನನಿಮಿತ್ತವಾಗಿ ದುಃಖಾದಿಗಳು ಪ್ರಸಕ್ತವಾಗಿವೆ. ಅಂತಹ ದುಃಖಾದಿಗಳು ಐಕ್ಯಜ್ಞಾನದಿಂದ ವಿನಾಶ್ಯವಾಗಿವೆ. ಆದ್ದರಿಂದ ದುಃಖಾದಿ ಅನರ್ಥಕ್ಕೆ ಹೇತುವಾದ ಅಜ್ಞಾನದ (ಐಕ್ಯಾಜ್ಞಾನದ) ನಾಶಕ್ಕಾಗಿ, ಜೀವ-ಬ್ರಹ್ಮರಲ್ಲಿ ಐಕ್ಯಜ್ಞಾನವನ್ನು ಮಾಡಿಸುವುದಕ್ಕಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳ ಆರಂಭವಾಗಿದೆ (ಶಾಸ್ತ್ರಗಳು ಪ್ರವೃತ್ತವಾಗಿವೆ) '' ಎಂದು ಹೇಳುತ್ತಾರೆ.

**ವಿವರಣೆ :-** ಜೀವನು ಬ್ರಹ್ಮನಿಂದ ಸ್ವಾಭಾವಿಕವಾಗಿಯೇ ಅಭಿನ್ನ. ಅಂದರೆ ಜೀವ-ಬ್ರಹ್ಮರಲ್ಲಿ ಪಾರಮಾರ್ಥಿಕವಾಗಿ (ನಿಜವಾಗಿ) ಅಭೇದವೇ ಇದೆ. ಹಾಗಾದರೆ ಬ್ರಹ್ಮನಿಗಿಲ್ಲದ ದುಃಖಾದಿಗಳು ಜೀವನಿಗೆ ಏಕೆ ? ಎಂದರೆ, ಜೀವನು ನಿಜವಾಗಿ ಬ್ರಹ್ಮನಿಂದ ಅಭಿನ್ನನಾಗಿದ್ದರೂ 'ತಾನು ಬ್ರಹ್ಮನಿಂದ ಅಭಿನ್ನ' ಎಂಬ ಐಕ್ಯಜ್ಞಾನ ಅವನಿಗೆ ಇಲ್ಲ. ಅಂದರೆ ಐಕ್ಯಾಜ್ಞಾನವಿದೆ. ಈ ಐಕ್ಯಾಜ್ಞಾನನಿಮಿತ್ತವಾಗಿ ಜೀವನಿಗೆ ದುಃಖಾದಿಗಳು ಪ್ರಸಕ್ತವಾಗಿವೆ.

ಹಾಗಾದರೆ ಈ ದುಃಖಾದಿಗಳ ವಿನಾಶ ಹೇಗೆ ? ಎಂದರೆ, ಐಕ್ಯಜ್ಞಾನದಿಂದ ದುಃಖಾದಿಗಳ ವಿನಾಶವಾಗುತ್ತದೆ. ಅಂದರೆ - ಐಕ್ಯಜ್ಞಾನ ಮಾಡಿಕೊಂಡರೆ ಅದರಿಂದ ಐಕ್ಯಾಜ್ಞಾನ ನಿವೃತ್ತವಾಗುತ್ತದೆ. ಐಕ್ಯಾಜ್ಞಾನ ನಿವೃತ್ತವಾದರೆ ಅದರ ಕಾರ್ಯವಾದ ದುಃಖಾದಿಗಳೂ ಸ್ವಯಂ ನಿವೃತ್ತವಾಗುತ್ತವೆ ಎಂದು ಭಾವ. ಈ ಹಿನ್ನೆಲೆಯಲ್ಲಿ ದುಃಖಾದಿಅನರ್ಥಕ್ಕೆ ಹೇತು(ಕಾರಣ)ವಾದ ಐಕ್ಯಾಜ್ಞಾನದ ನಾಶಕ್ಕಾಗಿ, ಅದಕ್ಕಾಗಿ ಜೀವ-ಬ್ರಹ್ಮರಲ್ಲಿ ಐಕ್ಯಜ್ಞಾನವನ್ನು ಮಾಡಿಸುವುದಕ್ಕಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳು ಹೊರಟಿವೆ ಎಂಬುದಾಗಿ ಮಾಯಾವಾದಿಗಳು ಅಭಿಪ್ರಾಯಪಡುತ್ತಾರೆ.

**ಅಧಿಕಾರ್ಯಾದಿ ಅನುಬಂಧ ಚತುಷ್ಟಯಗಳು**

ಈ ರೀತಿಯಾಗಿ ನಿರೂಪಿಸುವುದರಿಂದ ಮಾಯಾವಾದಮತದ ಪ್ರಕಾರವಾಗಿ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಅಧಿಕಾರ್ಯಾದಿ ಅನುಬಂಧಚತುಷ್ಟಯವನ್ನು ಹೇಳಿದಂತಾಗುತ್ತದೆ :-

**ವಿಷಯ :-** ಜೀವ-ಬ್ರಹ್ಮರ ಐಕ್ಯವೇ ವಿಷಯ.

**ಪ್ರಯೋಜನ :-** ಐಕ್ಯಾಜ್ಞಾನನಿವೃತ್ತಿ-ಐಕ್ಯಜ್ಞಾನಪ್ರಾಪ್ತಿ ಪ್ರಯೋಜನ.

**ಅಧಿಕಾರಿ :-** ಐಕ್ಯಾಜ್ಞಾನನಿವೃತ್ತಿಯನ್ನು ಅಪೇಕ್ಷಿಸುವವನೇ ಅಧಿಕಾರಿ.

**ಸಂಬಂಧ :-** ಯಥಾಯೋಗ್ಯವಾಗಿ ಸಂಬಂಧ.

**(ಯಥಾಯೋಗ್ಯವಾಗಿ ಸಂಬಂಧವನ್ನು ಹಿಂದೆ ನಿರೂಪಿಸಿದಂತೆ ತಿಳಿಯುವುದು.)**

ಈ ರೀತಿಯಾಗಿ ಮಾಯಾವಾದಿಗಳು ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಗೆ ಯಾವಾದಮತದ ಪ್ರಕಾರವಾಗಿ ಅಧಿಕಾರ್ಯಾದಿ ಅನುಬಂಧಚತುಷ್ಟಯವನ್ನು ೂಪಿಸುತ್ತಾರೆ.

**ಟೀಕಾ :- ತನ್ಮತಮಪಾಕೃತ್ಯ ಸ್ವಮತಂ ಸಮರ್ಥಯಿತುಮಿದಂ ’ರಣಮಾರಭಮಾಣೋ ಭಗವಾನಾಚಾರ್ಯಃ ಪರಮಮಂಗಲಂ ಿಂಹಸ್ತವನಮಾದಾವಾಚರತಿ -**

**ಅನುವಾದಃ-** ಇಂತಹ ಮಾಯಾವಾದಮತವನ್ನು (ಮಾಯಾವಾದಮತದ ಪ್ರಕಾರ ೂಪಿತವಾದ ವಿಷಯಾದಿಗಳನ್ನು) ನಿರಾಕರಿಸಿ, ಸ್ವಮತವನ್ನು (ಸಿದ್ಧಾಂತದ ಪ್ರಕಾರ ೂಪಿಸಿದ ವಿಷಯಾದಿಗಳನ್ನು) ಸಮರ್ಥಿಸುವುದಕ್ಕಾಗಿ ಈ ಾಯಾವಾದಖಂಡನ'' ಎಂಬ ಪ್ರಕರಣವನ್ನು ಆರಂಭಿಸಲು ಹೊರಟ, ಪೂಜ್ಯರಾದ ಾರ್ಯರು, ಪರಮಮಂಗಲರೂಪವಾದ ನರಸಿಂಹದೇವರ ಸ್ತೋತ್ರರೂಪವಾದ ಗಲಾಚರಣೆಯನ್ನು ಗ್ರಂಥದ ಪ್ರಾರಂಭದಲ್ಲಿ ಆಚರಿಸುತ್ತಾರೆ :-

## - ಮಾಯಾವಾದಖಂಡನ -

**ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।**
**ಜಯತ್ಯಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ ॥**

**ಅನುವಾದಃ-** ಅಖಿಲಾಜ್ಞಾನಮತಧ್ವಾಂತದಿವಾಕರಃ, ಅಖಿಲ=ಬ್ರಹ್ಮಾತಿರಿಕ್ತವಾದ ಜಗತ್ತೂ ಅಜ್ಞಾನ=ಅಜ್ಞಾನಕಲ್ಪಿತ ಎಂದು ಹೇಳುವ ಮತ=ಮಾಯವಾದಮತವೆಂಬ ತ=ಕತ್ತಲೆಯನ್ನು ನಿರಾಸ ಮಾಡುವುದರಲ್ಲಿ ದಿವಾಕರಃ=ಸೂರ್ಯನಂತೆ ಇರುವ, ತಸಜ್ಜ್ಞಾನಸುಖಶಕ್ತಿಪಯೋನಿಧಿಃ, ಅಮಿತ=ಅಪರಿಮಿತರಾದ, ಸಜ್ಜ್ಞಾನ= ಥಾರ್ಥವಾದ ಜ್ಞಾನ, ಸತ್ಸುಖ=ದುಃಖಾಸಂಭಿನ್ನವಾದ ಸುಖ, ಸಚ್ಛಕ್ತಿ=ಅಪ್ರತಿಬದ್ಧವಾದ ಇವುಗಳಿಂದ ಸಮುದ್ರದಂತೆ ಇರುವ ನರಸಿಂಹಃ=ನರಸಿಂಹದೇವರು ಜಯತಿ= ಕೃಷ್ಟರಾಗಿದ್ದಾರೆ.

**ಅವತಾರಿಕೆ:-** ಎಲ್ಲವೂ ಅಜ್ಞಾನಕಲ್ಪಿತ ಎಂದು ಹೇಳಿದರೆ ಬ್ರಹ್ಮನೂ ಅಜ್ಞಾನಕಲ್ಪಿತನಾಗಬೇಕಾಗುತ್ತದೆ. ಹಾಗೆ ಬ್ರಹ್ಮನಿಗೂ ಅಜ್ಞಾನಕಲ್ಪಿತತ್ವವನ್ನು ಹೇಳಿದರೆ ಅಪಸಿದ್ಧಾಂತ ಬರುತ್ತದೆ. ಅದಕ್ಕಾಗಿ ಅಖಿಲಾಜ್ಞಾನಮತಧ್ವಾಂತದಿವಾಕರಃ ಎಂಬ ಮೂಲದ ಅಭಿಪ್ರಾಯವನ್ನು ಸ್ಪಷ್ಟಮಾಡುತ್ತಾರೆ -

**ಟೀಕಾ :- ಅಖಿಲಂ ಚೈತನ್ಯಮಾತ್ರಾತಿರಿಕ್ತಂ ಅಜ್ಞಾನಕಲ್ಪಿತಮಿತಿ ಯನ್ಮತಂ ತದೇವ ಧ್ವಾಂತಮಿವ । ಸಮ್ಯಗ್‌ಜ್ಞಾನಪ್ರತಿರೂಪತ್ವಾತ್ । ತನ್ನಿರಸನೇ ದಿವಾಕರ ಇವ ।**

**ಅನುವಾದ:-** ಅಖಿಲಂ=ಎಲ್ಲವೂ ಎಂದರೆ, ಕೇವಲ ಬ್ರಹ್ಮನನ್ನು ಹೊರತುಪಡಿಸಿ ಇತರವಾದ ಎಲ್ಲ ಜಗತ್ತು ಅಜ್ಞಾನಕಲ್ಪಿತವಾಗಿದೆ ಎಂದು ಹೇಳುವ ಯಾವ ಮಾಯವಾದಮತವಿದೆಯೋ ಆ ಮತವೇ ಕತ್ತಲೆಯಂತೆ. ಏಕೆ ? ಯಥಾರ್ಥಜ್ಞಾನಕ್ಕೆ ಪ್ರತಿಬಂಧಕವಾದ್ದರಿಂದ. (ಕತ್ತಲೆಯು ಹೇಗೆ ಯಥಾರ್ಥಜ್ಞಾನಕ್ಕೆ ಪ್ರತಿಬಂಧಕವೋ ಹಾಗೆ ಮಾಯವಾದಮತವೂ ಯಥಾರ್ಥಜ್ಞಾನಕ್ಕೆ ಪ್ರತಿಬಂಧಕವಾಗಿದೆ. ಆದ್ದರಿಂದ ಮಾಯವಾದಮತವನ್ನು ಕತ್ತಲೆಗೆ ಹೋಲಿಸಿದ್ದಾರೆ.) ಅಂತಹ ಮಾಯವಾದಮತವೆಂಬ ಕತ್ತಲೆಯನ್ನು ನಿರಾಸ ಮಾಡುವುದರಲ್ಲಿ ಸೂರ್ಯನಂತೆ ಇದ್ದಾರೆ ನರಸಿಂಹದೇವರು ಎಂದು ಭಾವ.

**ವಿಶೇಷವಿಚಾರ - 1)** 'ದೇವಪೂಜಕೋ ಬ್ರಾಹ್ಮಣಃ ದೇವಬ್ರಾಹ್ಮಣಃ' ಎನ್ನುವಲ್ಲಿ ಪೂಜಕ ಎಂಬ ಮಧ್ಯಮಪದಕ್ಕೆ ಲೋಪವನ್ನು ಅಂಗೀಕರಿಸುವುದರಿಂದ ಅದು ಹೇಗೆ ಮಧ್ಯಮಪದಲೋಪೀಸಮಾಸವಾಗಿದೆಯೋ, ಅದರಂತೆ 'ಅಜ್ಞಾನಪರಿಕಲ್ಪಿತಂ ಇತಿ ಮತಂ ಅಜ್ಞಾನಮತಂ' ಎನ್ನುವಲ್ಲಿಯೂ ಸಹ ಪರಿಕಲ್ಪಿತ ಎಂಬ ಮಧ್ಯಮಪದಕ್ಕೆ ಲೋಪವನ್ನು ಅಂಗೀಕರಿಸಿದ್ದರಿಂದ ಇದೂ ಸಹ ಮಧ್ಯಮಪದಲೋಪೀಸಮಾಸವಾಗಿದೆ.

**ವಿಶೇಷವಿಚಾರ - 2)** ಇಲ್ಲಿ 'ಅಜ್ಞಾನೇನ ಪರಿಕಲ್ಪಿತಂ ಅಜ್ಞಾನಪರಿಕಲ್ಪಿತಂ, ಅಜ್ಞಾನಪರಿಕಲ್ಪಿತಂ ಚ ತತ್ ಅಖಿಲಂ ಚ' ಎಂಬುದಾಗಿ ವಿಗ್ರಹ ಮಾಡಿಕೊಂಡಾಗ 'ಅಜ್ಞಾನಾಖಿಲಂ' ಎಂದು ಸಮಸ್ತಪದ ನಿಲ್ಲಬೇಕಿತ್ತು. ಆದರೆ ವಿಶೇಷ್ಯಭೂತವಾದ ಅಖಿಲಪದಕ್ಕೆ ಪೂರ್ವನಿಪಾತವನ್ನು ಅಂಗೀಕರಿಸಿ, ''ವಿಶೇಷಣಂ ವಿಶೇಷ್ಯೇಣ ಬಹುಲಂ'' ಎನ್ನುವಲ್ಲಿ ಬಹುಲಗ್ರಹಣ ಮಾಡಿದ್ದರಿಂದ, ವಿಶೇಷ್ಯಕ್ಕೂ ವಿಶೇಷಣದ ಜೊತೆಗೆ ಸಮಾಸವನ್ನು ಅಂಗೀಕರಿಸಿದ್ದರಿಂದ ಅಖಿಲಾಜ್ಞಾನಂ ಎಂದು ಸಮಸ್ತಪದ ನಿಂತಿದೆ. ಹಾಗಾಗಿ-

''ಅಖಿಲಾಜ್ಞಾನಮಿತಿ (ಅಖಿಲಂ ಅಜ್ಞಾನಪರಿಕಲ್ಪಿತಂ ಇತಿ) ಮತಮ್ ಅಖಿಲಾಜ್ಞಾನಮತಂ, ಅಖಿಲಾಜ್ಞಾನಮತಮೇವ ಧ್ವಾಂತಮಿವ ಅಖಿಲಾಜ್ಞಾನ-ಮತಧ್ವಾಂತಮ್, ಅಖಿಲಾಜ್ಞಾನಮತಧ್ವಾಂತಸ್ಯ ದಿವಾಕರ ಇವ ಅಖಿಲಾಜ್ಞಾನ-ಮತಧ್ವಾಂತದಿವಾಕರಃ'' ಎಂದು ವಿಗ್ರಹ ತಿಳಿಯುವುದು.

**ಅವತಾರಿಕೆ :-** ಅಭಿಭವ (ತಿರಸ್ಕಾರ) ಎಂಬ ಅರ್ಥದಲ್ಲಿರುವ ಜಯಿಧಾತುವು ಸಕರ್ಮಕವಾಗಿದೆ. 'ದೇವದತ್ತಃ ಶತ್ರೂನ್ ಜಯತಿ' ಇತ್ಯಾದಿಗಳಲ್ಲಿ ಅದು ಕಂಡಿದೆ. ಪ್ರಕೃತ ಮಂಗಲಪದ್ಯದಲ್ಲಿರುವ ಜಯಿಧಾತುವೂ ಅಭಿಭವಾರ್ಥಕವಾಗಿರುವ ಕಾರಣ ಸಕರ್ಮಕವಾಗಿದೆ. ಅಂತೆಯೇ ಇದಕ್ಕೆ ಆಚಾರ್ಯರು ಕರ್ಮವನ್ನು (ಕರ್ಮವಾಚಕ-ಪದವನ್ನು) ಹೇಳಬೇಕಿತ್ತು. ಆದರೆ ನರಸಿಂಹಃ ಎಂದು ಕರ್ತೃವಾಚಕಪದವನ್ನು ಹೇಳಿದ್ದಾರೆ, ಜಯತಿ ಎಂದು ಕ್ರಿಯಾಪದವನ್ನು ಹೇಳಿದ್ದಾರೆ. ಹೊರತು ಕರ್ಮವನ್ನು ಹೇಳಿಯೇ ಇಲ್ಲ. ಆದ್ದರಿಂದ ನ್ಯೂನತಾ ಬರುತ್ತದೆ ಎಂಬುದಾಗಿ ಶಂಕೆ ಬಂದರೆ, ಸಮಾಧಾನಕ್ಕಾಗಿ ಹೇಳುತ್ತಾರೆ -

**ಟೀಕಾ :- ಜಯತಿ ಉತ್ಕೃಷ್ಟೋ ವರ್ತತೇ । ತಥಾ ಚೋಕ್ತಂ -**

**ಜಯೇರ್ಜಯಾಭಿಭವಯೋರಾದ್ಯೇಽರ್ಥೇಽಸಾವಕರ್ಮಕಃ ।**
**ಉತ್ಕರ್ಷಪ್ರಾಪ್ತಿರಾದ್ಯೋಽರ್ಥೋ ದ್ವಿತೀಯೇಽರ್ಥೇ ಸಕರ್ಮಕಃ ॥ ಇತಿ**

**ಅನುವಾದ :-** 'ದೇವದತ್ತಃ ಶತ್ರೂನ್ ಜಯತಿ' ಇತ್ಯಾದಿಸ್ಥಳಗಳಲ್ಲಿ ಜಯಿಧಾತುವು ಅಭಿಭವಾರ್ಥಕವಾದ ಕಾರಣ ಸಕರ್ಮಕವಾಗಿ ಕರ್ಮವು ಉಕ್ತವಾಗಿದೆ. ಆದರೆ ಪ್ರಕೃತ ಮಂಗಲಪದ್ಯದಲ್ಲಿರುವ ಜಯಿಧಾತುವು ಅಭಿಭವಾರ್ಥಕವಾಗಿಲ್ಲ. ಕಿಂತು ಉತ್ಕೃಷ್ಟತ್ವೇನ ಸತ್ತಾರ್ಥಕವಾಗಿದೆ. ಉತ್ಕೃಷ್ಟತ್ವೇನ ಸತ್ತಾ ಎಂಬ ಅರ್ಥದಲ್ಲಿ ಜಯಿಧಾತುವು ಅಕರ್ಮಕವೇ ಆಗಿದೆ. ಆದ್ದರಿಂದ ಮಂಗಲಪದ್ಯದಲ್ಲಿ ಕರ್ಮವನ್ನು ಹೇಳದಿರುವುದು ದೋಷವಲ್ಲ.

ಈ ವಿಷಯದಲ್ಲಿ ನಿಯಾಮಕಪ್ರಮಾಣವನ್ನು ಹೇಳುತ್ತಾರೆ -

**ಜಯೇರ್ಜಯಾಭಿಭವಯೋರಾದ್ಯೇಽರ್ಥೇಽಸಾವಕರ್ಮಕಃ ।**
**ಉತ್ಕರ್ಷಪ್ರಾಪ್ತಿರಾದ್ಯೋಽರ್ಥೋ ದ್ವಿತೀಯೇಽರ್ಥೇ ಸಕರ್ಮಕಃ ॥**

ಜೀ ಜಯೇ ಧಾತುವಿಗೆ ಜಯ-ಅಭಿಭವ ಎಂದು ಎರಡು ಅರ್ಥಗಳಲ್ಲಿ ವೃತ್ತಿ ಇದೆ. ಜಯ ಅಂದರೆ ಉತ್ಕರ್ಷಪ್ರಾಪ್ತಿ ಅನ್ನುವುದು ಮೊದಲನೇ ಅರ್ಥವಾಗಿದೆ. ಅಭಿಭವ ಅಂದರೆ ತಿರಸ್ಕಾರ ಎನ್ನುವುದು ಎರಡನೇ ಅರ್ಥವಾಗಿದೆ. ಈ ಜಯಿಧಾತುವು ಉತ್ಕರ್ಷಪ್ರಾಪ್ತಿ ಎಂಬ ಮೊದಲನೇ ಅರ್ಥದಲ್ಲಿ ಅಕರ್ಮಕವಾಗಿದೆ. ಇನ್ನು ಅಭಿಭವ (ತಿರಸ್ಕಾರ) ಎಂಬ ಎರಡನೇ ಅರ್ಥದಲ್ಲಿ ಅದು ಸಕರ್ಮಕವಾಗಿದೆ ಎಂದು ಭಾವ.

**ಟೀಕಾ :- ಸತ್ವಂ ಜ್ಞಾನಸುಖಶಕ್ತೀನಾಂ ವಿಶೇಷಣವಮ್ । ಜ್ಞಾನಸ್ಯ ಯಥಾರ್ಥತ್ವಂ ಸತ್ವಂ, ಸುಖಸ್ಯ ದುಃಖಾಸಂಭಿನ್ನತ್ವಂ, ಶಕ್ತೇರಪ್ರತಿಬದ್ಧತಾ । ತಾಭಿಃ ಪಯೋನಿಧಿರಿವ । ಪಯೋನಿಧಿಃ ಪರಿಮಿತೋ ಭವತೀತ್ಯತಸ್ತಮಮಿತತ್ವೇನ ವಿಶಿನಷ್ಟಿ ।**

**ಅನುವಾದ :-** 'ಅಮಿತಸಜ್‌ಜ್ಞಾನಸುಖಶಕ್ತಿಪಯೋನಿಧಿಃ' ಎನ್ನುವಲ್ಲಿ ಸತ್ವವು ಕೇವಲ ಜ್ಞಾನಕ್ಕೆ ಮಾತ್ರ ವಿಶೇಷಣವಲ್ಲ. ಕಿಂತು ಜ್ಞಾನ-ಸುಖ-ಶಕ್ತಿ ಮೂರಕ್ಕೂ ವಿಶೇಷಣವಾಗಿದೆ. ಜ್ಞಾನವು ಸತ್ ಆಗಿದೆ ಎಂದರೆ ಯಥಾರ್ಥವಾಗಿದೆ ಎಂದರ್ಥ. ಸುಖವು ಸತ್ ಆಗಿದೆ ಎಂದರೆ ದುಃಖಾಸಂಭಿನ್ನವಾಗಿದೆ ಎಂದರ್ಥ. ಶಕ್ತಿಯು ಸತ್ ಆಗಿದೆ ಎಂದರೆ ಅಪ್ರತಿಬದ್ಧವಾಗಿದೆ ಎಂದರ್ಥ. ಇಂತಹ ಯಥಾರ್ಥವಾದ ಜ್ಞಾನ, ದುಃಖಾಸಂಭಿನ್ನವಾದ ಸುಖ, ಅಪ್ರತಿಬದ್ಧವಾದ ಶಕ್ತಿ ಇವುಗಳಿಂದ ಪಯೋನಿಧಿಯಂತೆ (ಸಮುದ್ರದಂತೆ) ಇದ್ದಾರೆ ನರಸಿಂಹದೇವರು ಎಂದರ್ಥ.

**''ಅಮಿತ '' ಎಂಬ ವಿಶೇಷಣ ಏಕೆ ?**

''ಸತ್ ಜ್ಞಾನ-ಸುಖ-ಶಕ್ತಿಗಳಿಂದ ಪಯೋನಿಧಿಯಂತೆ ಇದ್ದಾರೆ'' ಎಂದು ಹೇಳುವುದು ಹೇಗೆ ಉಪಪನ್ನವಾಗುತ್ತದೆ ? ಯಾಕೆಂದರೆ -ಪಯೋನಿಧಿಯು ಪರಿಮಿತವಾದ ವಸ್ತು. ಸಮುದ್ರದ ಮುಂದೆ ನಿಂತಾಗ ದಡೆಯು ನಮ್ಮ ಕಣ್ಣಿಗೆ ಕಾಣುವುದಿಲ್ಲ ನಿಜ. ಆದರೆ ಸಮುದ್ರಕ್ಕೆ ಒಂದು ಕಡೆ ದಡೆಯು ಇರುವುದು ನಿಶ್ಚಿತ. ಪ್ರಕೃತ ಜ್ಞಾನ-ಸುಖ-ಶಕ್ತಿಗಳಿಂದ ಸಮುದ್ರದಂತೆ ಇದ್ದಾರೆ ಎಂದು ಹೇಳಿದರೆ, ನರಸಿಂಹದೇವರ ಜ್ಞಾನ-ಸುಖ-ಶಕ್ತಿಗಳಿಗೆ ಒಂದು ಸೀಮೆ ಇದೆ ಎಂದು ಹೇಳಿದಂತಾಗುತ್ತದೆ.

ಆ ಶಂಕೆಯ ಪರಿಹಾರಕ್ಕಾಗಿ ನರಸಿಂಹದೇವರಿಗೆ ಅಮಿತತ್ವವನ್ನು ವಿಶೇಷಣವನ್ನಾಗಿ ಕೊಟ್ಟಿದ್ದಾರೆ. ಜ್ಞಾನ-ಸುಖ-ಶಕ್ತಿಗಳಿಂದ ಸಮುದ್ರದಂತೆ ಇದ್ದಾರೆ. ಆದರೆ ಸಮುದ್ರದಂತೆ ಸೀಮಾ ಉಳ್ಳವರು ಅಲ್ಲ. ಕಿಂತು ಅಮಿತರೂ ಆಗಿದ್ದಾರೆ ಎಂದು ಹೇಳಿದಂತಾಗುತ್ತದೆ. ಹಾಗಾದರೆ -

''ಜ್ಞಾನಂ ಚ ಸುಖಂ ಚ ಶಕ್ತಿಶ್ಚ ಜ್ಞಾನಸುಖಶಕ್ತಯಃ । ಸತ್ಯಶ್ಚ ತಾಃ ಜ್ಞಾನಸುಖಶಕ್ತಯಶ್ಚ ಸಜ್ಜ್ಞಾನಸುಖಶಕ್ತಯಃ । ಸಜ್ಜ್ಞಾನಸುಖಶಕ್ತಿಭಿಃ ಪಯೋನಿಧಿರಿವ ಸಜ್ಜ್ಞಾನಸುಖಶಕ್ತಿಪಯೋನಿಧಿಃ । ಅಮಿತಶ್ಚಾಸೌ ಸಜ್ಜ್ಞಾನಸುಖಶಕ್ತಿಪಯೋನಿಧಿಶ್ಚ ಅಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ'' ಎಂದು ವಿಗ್ರಹ ತಿಳಿಯುವುದು.

**ಅವತಾರಿಕೆ :-** ಇತರ ವಿಶೇಷಣಗಳನ್ನು ಬಿಟ್ಟು ಈ ಎರಡು ವಿಶೇಷಣಗಳಿಂದಲೇ ಸ್ತೋತ್ರ ಮಾಡುವುದಕ್ಕೆ ಏನು ಪ್ರಯೋಜನ ? ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುತ್ತಾರೆ -

**ಟೀಕಾ :- ದ್ವಿವಿಧಃ ಖಲು ಪುರುಷಾರ್ಥೋಽನಿಷ್ಟನಿವೃತ್ತಿರಿಷ್ಟಪ್ರಾಪ್ತಿಶ್ಚ । ತತ್ರ ಅಖಿಲೇತಿ ಮಾಯಾವಾದಾದಿದುರ್ಮತಪ್ರಸಂಜಿತಮಿಥ್ಯಾಜ್ಞಾನಾದ್ಯಾನಿಷ್ಟ-ನಿವರ್ತಕತ್ವೇನ ನರಸಿಂಹಸ್ತುತಿರ್ವಿಹಿತಾ । ಅಮಿತೇತಿ ಸಮ್ಯಗ್ಜ್ಞಾನಾದಿ-ಸಮಸ್ತೇಷ್ಟಸಂಪಾದನಸಮರ್ಥತ್ವೇನೇತಿ ॥**

**ಅನುವಾದ :-** ಅನಿಷ್ಟನಿವೃತ್ತಿ - ಇಷ್ಟಪ್ರಾಪ್ತಿ ಎಂಬುದಾಗಿ ಪುರುಷಾರ್ಥವು ಎರಡುವಿಧವಾಗಿದೆ. ಅದರಲ್ಲಿ ಮಾಯಾವಾದಾದಿ ದುರ್ಮತಗಳಿಂದ ಪ್ರಸಕ್ತವಾದ ಮಿಥ್ಯಾಜ್ಞಾನಾದಿ ಅನಿಷ್ಟನಿವೃತ್ತಿಯನ್ನು ಕೊಡುವವರಾಗಿ ನರಸಿಂಹದೇವರನ್ನು ''ಅಖಿಲಾಜ್ಞಾನಮತಧ್ವಾಂತದಿವಾಕರಃ'' ಎಂಬ ವಿಶೇಷಣದಿಂದ ಸ್ತೋತ್ರ ಮಾಡಿದ್ದಾರೆ. ಇನ್ನು ಸಮ್ಯಗ್ಜ್ಞಾನ ಮೊದಲಾದ ಸಮಸ್ತ ಇಷ್ಟಸಂಪಾದನಸಮರ್ಥರಾಗಿ ''ಅಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ'' ಎಂಬ ವಿಶೇಷಣದಿಂದ ಸ್ತೋತ್ರ ಮಾಡಿದ್ದಾರೆ.

**ವಿವರಣೆ :-** ''ತಂ ಯಥಾ ಯಥೋಪಾಸತೇ ತದೇವ ಭವತಿ '' ಎಂದು ಶ್ರುತಿ ಇದೆ. ಅಂದರೆ ಪರಮಾತ್ಮನನ್ನು ನಾವು ಹೇಗೆ ಉಪಾಸನೆ ಮಾಡುತ್ತೇವೆ ನಮಗೂ ಆ ಫಲ ಸಿಗುತ್ತದೆ. ಉದಾ :- ಪರಮಾತ್ಮನನ್ನು ನಿರ್ದೋಷ ಎಂದು ಉಪಾಸನೆ ಮಾಡಿದರೆ, ನಮ್ಮ ಯೋಗ್ಯತಾನುಸಾರವಾಗಿ ನಾವೂ ದೋಷರಹಿತರಾಗುತ್ತೇವೆ. ಗುಣಪೂರ್ಣ ಎಂದು ಉಪಾಸನೆ ಮಾಡಿದರೆ ನಮ್ಮ ಯೋಗ್ಯತಾನುಸಾರವಾಗಿ ನಾವೂ ಗುಣಗಳುಳ್ಳವರಾಗುತ್ತೇವೆ.

ಪ್ರಕೃತ ನರಸಿಂಹದೇವರು ಅಖಿಲಾಜ್ಞಾನಮತಧ್ವಾಂತದಿವಾಕರರಾಗಿದ್ದಾರೆ ಎಂದು ಉಪಾಸನೆ ಮಾಡುವುದರಿಂದ, ನರಸಿಂಹದೇವರು ನಮಗೆ ಮಾಯಾವಾದಾದಿ

ದುರ್ಮತಗಳಿಂದ ಪ್ರಸಕ್ತವಾದ ಮಿಥ್ಯಾಜ್ಞಾನಾದಿ ಅನಿಷ್ಟನಿವೃತ್ತಿಯನ್ನು ಕೊಡುವವರಾಗುತ್ತಾರೆ. ಮತ್ತು ನರಸಿಂಹದೇವರು ಅಮಿತಸಜ್ಜ್ಞಾನ- ಸುಖಶಕ್ತಿಪಯೋನಿಧಿಗಳಾಗಿದ್ದಾರೆ ಎಂದು ಉಪಾಸನೆ ಮಾಡುವುದರಿಂದ, ಸಮ್ಯಗ್‌ಜ್ಞಾನಾದಿ ಸಮಸ್ತ ಇಷ್ಟಗಳನ್ನು ಕೊಡುವುದರಲ್ಲಿ ಸಮರ್ಥರಾಗುತ್ತಾರೆ ಎಂಬ ಅಭಿಪ್ರಾಯದಿಂದ ಇತರ ವಿಶೇಷಣಗಳನ್ನು ಬಿಟ್ಟು ಈ ಎರಡು ವಿಶೇಷಣಗಳಿಂದಲೇ ಸ್ತೋತ್ರ ಮಾಡಿದ್ದಾರೆ ಎಂದು ಭಾವ.

**ಟೀಕಾ :- ಅಖಿಲಾಜ್ಞಾನಮತಂ ಧ್ವಾಂತಸಮಮಿತ್ಯೇತದಸಹಮಾನ ಆಹ- ಜೀವಬ್ರಹ್ಮಣೋರೇಕತ್ವಂ ಹಿ ಶ್ರುತಿತನ್ಮೀಮಾಂಸಾಭಿಸ್ತಾತ್ಪರ್ಯತಃ ಪ್ರತಿಪಾದ್ಯತೇ। ನ ಚೈತಚ್ಚೈತನ್ಯಾತಿರಿಕ್ತಸ್ಯಾಖಿಲಸ್ಯ ಅಜ್ಞಾನಕಲ್ಪಿತತಯಾ ವಿನೋಪಪದ್ಯತೇ । ತತ್ ಕಥಮೇವಮುಚ್ಯತೇ ? ಇತಿ ।**

**ಅನುವಾದ :-** ''ಬ್ರಹ್ಮಾತಿರಿಕ್ತವಾದ ಸಮಸ್ತ ಜಗತ್ತು ಅಜ್ಞಾನಕಲ್ಪಿತವಾಗಿದೆ ಎಂದು ಹೇಳುವ ಮತವು ಧ್ವಾಂತಸಮವಾಗಿದೆ'' ಎಂದು ಹೇಳಿದ್ದನ್ನು ಸಹಿಸದವರಾಗಿ ಆಕ್ಷೇಪ ಮಾಡುತ್ತಾರೆ :- ಜೀವ-ಬ್ರಹ್ಮರ ಐಕ್ಯವು ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಂದ (ಶ್ರುತಿ ಹಾಗೂ ತದರ್ಥನಿಶ್ಚಾಯಕನ್ಯಾಯಗ್ರಥನಾತ್ಮಕವಾದ ಬ್ರಹ್ಮಮೀಮಾಂಸಾಶಾಸ್ತ್ರಗಳಿಂದ) ತಾತ್ಪರ್ಯಪೂರ್ವಕವಾಗಿ ಪ್ರತಿಪಾದ್ಯವಾಗಿದೆ. ಚೈತನ್ಯಾತಿರಿಕ್ತವಾದ ಸಮಸ್ತ ಜಗತ್ತಿಗೆ ಅಜ್ಞಾನಕಲ್ಪಿತತ್ವವನ್ನು ಅಂಗೀಕರಿಸದಿದ್ದರೆ ಈ ಜೀವ-ಬ್ರಹ್ಮರ ಐಕ್ಯವು ಉಪಪನ್ನವಾಗುವುದಿಲ್ಲ. ಅಂದಮೇಲೆ ಅಖಿಲಾಜ್ಞಾನಮತವು ಧ್ವಾಂತಸಮ ಎಂದು ಹೇಗೆ ಹೇಳುತ್ತೀರಿ ? ಎಂದು.

**ವಿವರಣೆ :-** ಜೀವ-ಬ್ರಹ್ಮರ ಐಕ್ಯವು ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಂದ ಪ್ರತಿಪಾದ್ಯವಾಗಿದೆ. ಕೇವಲ ಪ್ರತಿಪಾದ್ಯವಲ್ಲ. ಕಿಂತು ಐಕ್ಯವನ್ನು ಪ್ರತಿಪಾದಿಸುವುದರಲ್ಲಿ ಅವುಗಳಿಗೆ ತಾತ್ಪರ್ಯವೂ ಇದೆ. ಇಂತಹ ಐಕ್ಯವು ಉಪಪನ್ನವಾಗಬೇಕಾದರೆ ಚೈತನ್ಯಾತಿರಿಕ್ತವಾದ ಪ್ರಪಂಚಕ್ಕೆ ಅಜ್ಞಾನಕಲ್ಪಿತತ್ವವನ್ನು ಒಪ್ಪಲೇಬೇಕು. ಯಾಕೆಂದರೆ- ಬ್ರಹ್ಮಾತಿರಿಕ್ತವಾದ ಪ್ರಪಂಚಕ್ಕೆ ಅಜ್ಞಾನಕಲ್ಪಿತತ್ವರೂಪ ಮಿಥ್ಯಾತ್ವವನ್ನು ಅಂಗೀಕರಿಸದೇ ಹೋದರೆ ಈಶ್ವರನಿಷ್ಠವಾದ ಸರ್ವಜ್ಞತ್ವಾದಿಗಳು, ಜೀವನಿಷ್ಠವಾದ ಅಲ್ಪಜ್ಞತ್ವಾದಿಗಳು ಸತ್ಯವಾಗುತ್ತವೆ. ಸತ್ಯಭೂತವಾದ ಸರ್ವಜ್ಞತ್ವ-ಅಲ್ಪಜ್ಞತ್ವ, ಸುಖ-ದುಃಖಾದಿ ವಿರುದ್ಧಧರ್ಮಗಳಿಗೆ ಅಧಿಕರಣರಾದ ಜೀವ-ಬ್ರಹ್ಮರಲ್ಲಿ ಜಲ-ಅನಲಗಳಲ್ಲಿಯಂತೆ ಭೇದವೇ ಪ್ರಾಪ್ತವಾಗುತ್ತದೆ. ಹಾಗಾಗಿ ಜಗತ್ತು ಸತ್ಯವಾದರೆ ಜೀವ-ಬ್ರಹ್ಮರಲ್ಲಿ ಐಕ್ಯವು ಉಪಪನ್ನವಾಗುವುದಿಲ್ಲ.

ಹಾಗಾದರೆ ಶ್ರುತಿ-ತನ್ಮೀಮಾಂಸಾಶಾಸ್ತ್ರಗಳಿಂದ ತಾತ್ಪರ್ಯಪೂರ್ವಕವಾಗಿ ಪ್ರತಿಪಾದ್ಯವಾದಂತಹ ಐಕ್ಯವನ್ನು ಕೂಡಿಸಬೇಕಾದರೆ, ಬ್ರಹ್ಮಾತಿರಿಕ್ತವಾದ ಜಗತ್ತಿಗೆ ಅಜ್ಞಾನಕಲ್ಪಿತತ್ವವನ್ನು ಒಪ್ಪಲೇಬೇಕು. ಅಂದಮೇಲೆ 'ಅಖಿಲಾಜ್ಞಾನಮತವು ಧ್ವಾಂತಸಮ' ಎಂದು ಹೇಗೆ ಹೇಳುತ್ತೀರಿ ? ಎನ್ನುವುದು ಮಾಯಾವಾದಿಗಳ ಆಕ್ಷೇಪ.

**ಅವತಾರಿಕೆ :-** ಈ ಆಕ್ಷೇಪವನ್ನು ನಿರಾಕರಿಸುತ್ತಾರೆ :-

**ಟೀಕಾ :- ಮೈವಮ್ । ಸ್ಯಾದೇತದೇವಂ, ಯದಿ ಜೀವಬ್ರಹ್ಮಣೋರೈಕ್ಯ-ಪ್ರತಿಪಾದಕತ್ವಂ ವೇದತನ್ಮೀಮಾಂಸಯೋರುಪಪನ್ನಂ ಸ್ಯಾತ್ । ನ ಚೈತದಸ್ತಿ । ತತ್ಪರತಯಾ ವ್ಯಾಖ್ಯಾನೇ ವೇದಾದೇರನಾರಂಭಣೀಯತ್ವಪ್ರಸಂಗಾತ್ । ತತ್ಕಥಮಿತಿ । ತತ್ರಾಹ -**

**- ಮಾಯಾವಾದಖಂಡನ -**

ವಿಮತಂ ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್ ।
ಯದಿತ್ಥಂ ತತ್ತಥಾ ಯಥಾ ಸಂಪ್ರತಿಪನ್ನಮ್ ॥

**ಅನುವಾದ :-** ಈ ರೀತಿಯಾಗಿ ಆಕ್ಷೇಪ ಮಾಡುವುದು ಸರಿಯಲ್ಲ. ಏಕೆಂದರೆ ಒಂದುವೇಳೆ ವೇದ-ತನ್ಮೀಮಾಂಸಾಶಾಸ್ತ್ರಗಳಿಗೆ ಜೀವ-ಬ್ರಹ್ಮರ ಐಕ್ಯಪ್ರತಿಪಾದಕತ್ವವು ಉಪಪನ್ನವಾಗುತ್ತಿದ್ದರೆ ಆಗ ಈ ರೀತಿ ಆಕ್ಷೇಪ ಕೂಡುತ್ತಿತ್ತು. ಆದರೆ ವೇದ-ತನ್ಮೀಮಾಂಸಾಶಾಸ್ತ್ರಗಳನ್ನು ನೋಡಿದಾಗ ಐಕ್ಯವು ಪ್ರತಿಭಾಸವಾಗದ ಕಾರಣ ಶಾಸ್ತ್ರಗಳಿಗೆ ಐಕ್ಯಪ್ರತಿಪಾದಕತ್ವವೇ ಇಲ್ಲ.

ಐಕ್ಯವು ಪ್ರತಿಭಾಸವಾಗುವುದಿಲ್ಲ ಎಂದೇಕೆ ಹೇಳುತ್ತೀರಿ ? ವೇದಾದಿಶಾಸ್ತ್ರಗಳನ್ನು ಐಕ್ಯಪರವಾಗಿ ವ್ಯಾಖ್ಯಾನ ಮಾಡುತ್ತೇವೆ ಎಂದರೆ, ಹಾಗಾದರೆ ವೇದಾದಿಗಳು ಅನಾರಂಭಣೀಯವಾಗಬೇಕಾದ ಅತಿಪ್ರಸಂಗ ಬರುತ್ತದೆ. ಅದು ಹೇಗೆ ? ಎಂದರೆ, ಅದನ್ನು ಆಚಾರ್ಯರು ಅನುಮಾನದ (ತರ್ಕದ) ಮೂಲಕವಾಗಿ ತೋರಿಸಿಕೊಡುತ್ತಾರೆ-

**ವಿಮತಂ ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್ । ಯದಿತ್ಥಂ ತತ್ತಥಾ ಯಥಾ ಸಂಪ್ರತಿಪನ್ನಮ್ ।** (ಮೂಲ)

ವೇದಾದಿಶಾಸ್ತ್ರವು, ಅನಾರಂಭಣೀಯವಾಗಬೇಕಾಗುತ್ತದೆ, ಅನ್ಯಥಾ-ಪ್ರತಿಪಾದಕವಾದ್ದರಿಂದ. ಯಾವುದು ಅನ್ಯಥಾಪ್ರತಿಪಾದಕವಾಗುತ್ತದೆಯೋ ಅದು ಅನಾರಂಭಣೀಯವಾಗುತ್ತದೆ. ಹೇಗೆ ? ಬೌದ್ಧಶಾಸ್ತ್ರದಂತೆ (ಬೌದ್ಧಶಾಸ್ತ್ರವು ಅನ್ಯಥಾಪ್ರತಿಪಾದಕವಾದ್ದರಿಂದ ಅನಾರಂಭಣೀಯವಾದಂತೆ) ಎಂದು ಮೂಲಾರ್ಥ.

**ಅವತಾರಿಕೆ :-** ಅನುಮಾನದಲ್ಲಿ 'ವಿಮತ' ಶಬ್ದಪ್ರಯೋಗದ ಪ್ರಯೋಜನವನ್ನು ನಿರೂಪಿಸುತ್ತಾರೆ -

**ಟೀಕಾ :- ವಿಮತಂ ಆರಂಭಣೀಯತ್ವಾನಾರಂಭಣೀಯತ್ವಾಭ್ಯಾಂ ವಿಮತಿವಿಷಯೀಭೂತಂ ಶ್ರುತಿತನ್ಮೀಮಾಂಸಾಶಾಸ್ತ್ರಮ್ । 'ಶಾಸ್ತ್ರಮನಾರಂಭಣೀಯಂ' ಇತ್ಯೇವೋಕ್ತೇ ಬೌದ್ಧಾದಿಶಾಸ್ತ್ರಾಣಾಂ ಅನಾರಂಭಣೀಯತ್ವಸ್ಯ ಪರೇಣಾಭ್ಯುಪ-ಗತತ್ವಾತ್ ಇಷ್ಟಾಪಾದನಮೇತತ್ ಸ್ಯಾತ್ । ತರ್ಹಿ ವೇದಾದೀತ್ಯೇವೋಚ್ಯತಾಮ್ । ಮೈವಮ್ । ವಿಮತಿಗ್ರಹಣೇನ ನಿರಾಶ್ರಯತ್ವಾದಿದೋಷಪರಿಹಾರಸ್ಯಾಪಿ ಸೂಚಿತತ್ವಾತ್ ।**

**ಅನುವಾದ :-** ಇಲ್ಲಿ ವಿಮತ ಎಂದರೆ ಆರಂಭಣೀಯತ್ವ- ಅನಾರಂಭಣೀಯತ್ವ-ಗಳಿಂದ (ಆರಂಭಣೀಯತ್ವ-ಅನಾರಂಭಣೀಯತ್ವಗಳೇ ಕೋಟಿಯಾಗಿ ಉಳ್ಳ) ವಿಮತಿಯಲ್ಲಿ (ಸಂಶಯದಲ್ಲಿ) ವಿಷಯೀಭೂತವಾದ (ಧರ್ಮಿಭೂತವಾದ) ಶ್ರುತಿ-ತನ್ಮೀಮಾಂಸಾಶಾಸ್ತ್ರ ಎಂದರ್ಥ.

ಇಲ್ಲಿ ಕೇವಲ ''ಶಾಸ್ತ್ರಂ ಅನಾರಂಭಣೀಯಂ'' ಎಂದಷ್ಟೇ ಹೇಳಿದರೆ ಬೌದ್ಧಾದಿಶಾಸ್ತ್ರಗಳಿಗೆ ಅನಾರಂಭಣೀಯತ್ವವನ್ನು ಪರರೂ ಅಂಗೀಕರಿಸಿದ್ದರಿಂದ ಈ ಆಪಾದನೆಯು ಇಷ್ಟಾಪಾದನವಾಗುತ್ತದೆ. ಹಾಗಾದರೆ ''ವೇದಾದಿಶಾಸ್ತ್ರಂ ಅನಾರಂಭಣೀಯಂ'' ಎಂದೇ ಸ್ಪಷ್ಟವಾಗಿ ಹೇಳಬಹುದಲ್ಲ? (ವಿಮತಂ ಎಂದೇ ಏಕೆ ಹೇಳಬೇಕು ?) ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ-ವಿಮತಿಗ್ರಹಣದಿಂದ (ವಿಮತಶಬ್ದಪ್ರಯೋಗದಿಂದ) ಆಶ್ರಯಾಸಿದ್ಧಿ ಮೊದಲಾದ ದೋಷಗಳ ಪರಿಹಾರವೂ ಸೂಚಿತವಾಗುವುದರಿಂದ ವಿಮತಶಬ್ದಪ್ರಯೋಗ ಸಾರ್ಥಕ.

**ವಿವರಣೆ :-** ಇಲ್ಲಿ ವಿಮತಂ ಎಂದು ಪಕ್ಷನಿರ್ದೇಶ ಮಾಡಿದ್ದಾರೆ. ವಿಮತ ಎಂದರೆ ವಿಮತಿವಿಷಯೀಭೂತ ಎಂದರ್ಥ. ಅಂದರೆ ವಿಮತಿ=ಸಂಶಯ, ಆ ಸಂಶಯಕ್ಕೆ (ವಿಷಯೀಭೂತವಾದದ್ದು) ಧರ್ಮಿಯಾದದ್ದು ವಿಮತ ಎನಿಸಿಕೊಳ್ಳುತ್ತದೆ. ಹಾಗಾದರೆ ಒಟ್ಟಿನಲ್ಲಿ ವಿಮತ ಎಂದರೆ ಸಂಶಯಕ್ಕೆ ಧರ್ಮಿಯಾದದ್ದು ಎಂದು ಅರ್ಥವಾಗುತ್ತದೆ.

ಹೌದು, ಸಂಶಯ ಎಂದರೆ ಯಾವ ಸಂಶಯವನ್ನು ತೆಗೆದುಕೊಳ್ಳಬೇಕು ? 'ಶಬ್ದಃ ನಿತ್ಯೋ ವಾ ಅನಿತ್ಯೋ ವಾ ?' 'ಸ್ಥಾಣುರ್ವಾ ಪುರುಷೋ ವಾ ?' ಇತ್ಯಾದಿಯಾಗಿ ಜಗತ್ತಿನಲ್ಲಿ ಅನೇಕ ಸಂಶಯಗಳಿರುವಾಗ ಪ್ರಕೃತದಲ್ಲಿ ವಿಮತಿ ಎಂದಾಗ ಯಾವ ಸಂಶಯವನ್ನು ತೆಗೆದುಕೊಳ್ಳಬೇಕು ? ಎಂಬುದಾಗಿ ನಮಗೆ ಪ್ರಶ್ನೆ ಬರಬಹುದು. ಅದಕ್ಕೆ ಈ ರೀತಿ ಸಮಾಧಾನ ತಿಳಿಯಬಹುದು. ವಿಮತಿ ಎಂದಾಗ ಅನೇಕ ಸಂಶಯಗಳು ಪ್ರಸಕ್ತವಾದರೂ ಸಹ ಪ್ರಕೃತದಲ್ಲಿ 'ವಿಮತಂ ಅನಾರಂಭಣೀಯಂ' ಎಂಬ ಪ್ರತಿಜ್ಞೆಯಲ್ಲಿ ಅನಾರಂಭಣೀಯತ್ವ ಎಂಬ ಒಂದು ಕೋಟಿಯನ್ನು ಸೂಚಿಸಿರುವುದರಿಂದ (ಅನಾರಂಭಣೀಯತ್ವಕ್ಕೆ ವಿರುದ್ಧವಾದ ಆರಂಭಣೀಯತ್ವ ಎಂಬ ಇನ್ನೊಂದು ಕೋಟಿಯನ್ನು ತೆಗೆದುಕೊಂಡು) ಆರಂಭಣೀಯತ್ವ-ಅನಾರಂಭಣೀಯತ್ವ-ಕೋಟಿಕವಾದ ''ವೇದಾದಿಶಾಸ್ತ್ರಂ ಆರಂಭಣೀಯಂ ವಾ ? ಅನಾರಂಭಣೀಯಂ ವಾ ?'' ಎಂಬ ಸಂಶಯವಿಶೇಷವನ್ನು ತೆಗೆದುಕೊಳ್ಳಬೇಕು ಎಂದು ತಿಳಿದುಬರುತ್ತದೆ. ಹಾಗಾಗಿ ವಿಮತ ಎಂದರೆ ಆರಂಭಣೀಯತ್ವ-ಅನಾರಂಭಣೀಯತ್ವಕೋಟಿಕವಾದ ಸಂಶಯಕ್ಕೆ ಧರ್ಮಿಯಾದಂತಹ ವೇದಾದಿಶಾಸ್ತ್ರ ಎಂದು ಅರ್ಥವಾದಂತಾಯಿತು.

**'ವಿಮತ'ಶಬ್ದಪ್ರಯೋಗದ ಸಾರ್ಥಕತೆ**

ಇಲ್ಲಿ ವಿಮತಶಬ್ದಪ್ರಯೋಗದ ಬಗ್ಗೆ ವಿಚಾರ ಮಾಡುತ್ತಾರೆ :- ವೇದಾದಿಶಾಸ್ತ್ರವನ್ನು ಪಕ್ಷ ಮಾಡುವ ಉದ್ದೇಶ ಇದ್ದದ್ದಾದರೆ ಕೇವಲ ಶಾಸ್ತ್ರಂ ಎಂದಷ್ಟೇ ಪಕ್ಷನಿರ್ದೇಶ ಮಾಡಬಹುದಲ್ಲ ? ಎಂದರೆ, ಅದು ಸರಿಯಲ್ಲ. ಏಕೆಂದರೆ ಕೇವಲ ಶಾಸ್ತ್ರಂ ಎಂದಷ್ಟೇ ಪಕ್ಷನಿರ್ದೇಶ ಮಾಡಿದರೆ, ಶಾಸ್ತ್ರಪದದಿಂದ ಬೌದ್ಧಾದಿಶಾಸ್ತ್ರಗಳನ್ನೂ ಸ್ವೀಕರಿಸಲು ಬರುವುದರಿಂದ ಅಂತಹ ಬೌದ್ಧಾದಿಶಾಸ್ತ್ರಗಳಿಗೆ ಅನಾರಂಭಣೀಯತ್ವವನ್ನು ಆಪಾದನೆ ಮಾಡಿದರೆ ('ಯದಿ ಬೌದ್ಧಾದಿಶಾಸ್ತ್ರಂ ಅನ್ಯಥಾಪ್ರತಿಪಾದಕಂ ಸ್ಯಾತ್ ತರ್ಹಿ ಅನಾರಂಭಣೀಯಂ ಪ್ರಸಜ್ಯೇತ' ಎಂದು ಆಪಾದನೆ ಮಾಡಿದರೆ) ಬೌದ್ಧಾದಿಶಾಸ್ತ್ರಗಳಿಗೆ ಅನಾರಂಭಣೀಯತ್ವವನ್ನು ಪರರೂ ಅಂಗೀಕರಿಸಿದ್ದರಿಂದ ಅದು ಇಷ್ಟಾಪಾದನವಾಗುತ್ತದೆ. ಆದ್ದರಿಂದ ಕೇವಲ ಶಾಸ್ತ್ರಂ ಎಂದಷ್ಟೇ ಪಕ್ಷನಿರ್ದೇಶ ಮಾಡುವುದು ಸರಿಯಲ್ಲ.

ಹಾಗಾದರೆ ಕೇವಲ ಶಾಸ್ತ್ರಂ ಎಂದಷ್ಟೇ ಹೇಳದೇ ವೇದಾದಿಶಾಸ್ತ್ರಂ ಎಂದೇ ಹೇಳಿರಿ? ವೇದಾದಿಶಾಸ್ತ್ರಂ ಎಂದು ಸ್ಪಷ್ಟವಾಗಿ ಹೇಳಿದ್ದರಿಂದ ಬೌದ್ಧಾದಿಶಾಸ್ತ್ರವನ್ನು ತೆಗೆದುಕೊಂಡು ಇಷ್ಟಾಪಾದನ ಹೇಳಲು ಬರುವುದಿಲ್ಲ. ಆದ್ದರಿಂದ ವೇದಾದಿಶಾಸ್ತ್ರಂ ಎಂದೇ ಹೇಳಲು

ಬರುವಾಗ ಅದನ್ನು ಬಿಟ್ಟು ವಿಮತಂ ಎಂದೇ ಏಕೆ ಹೇಳಬೇಕು ? ಎಂಬುದಾಗಿ ವಿಮತಶಬ್ದಪ್ರಯೋಗದ ಬಗ್ಗೆ ನಿಷ್ಪ್ರಯೋಜನತ್ವಶಂಕೆ ಬಂದರೆ, ಈ ರೀತಿಯಾಗಿ ನಿಷ್ಪ್ರಯೋಜನತ್ವವನ್ನು ಶಂಕಿಸುವುದು ಸರಿಯಲ್ಲ. ಯಾಕೆಂದರೆ-ವಿಮತಶಬ್ದ ಪ್ರಯೋಗದಿಂದ ಆಶ್ರಯಾಸಿದ್ಧಿ ಮೊದಲಾದ ದೋಷಗಳ (ಆಶ್ರಯಾಸಿದ್ಧಿ-ಅಪ್ರಸಿದ್ಧವಿಶೇಷಣತಾ-ಸಿದ್ಧಸಾಧನತಾ ದೋಷಗಳ) ಪರಿಹಾರವೂ ಸೂಚಿತವಾಗುತ್ತದೆ. ಅದು ಹೇಗೆಂದರೆ -

**ವಿಮತ ಶಬ್ದದಿಂದ ಆಶ್ರಯಾಸಿದ್ಧಿ ಪರಿಹಾರಸೂಚನೆ**

ಪಕ್ಷವಾದ ವೇದಾದಿಶಾಸ್ತ್ರವೇ ಅಪ್ರಸಿದ್ಧವಾದ್ದರಿಂದ ನಿಮ್ಮ ಅನುಮಾನಕ್ಕೆ ಆಶ್ರಯಾಸಿದ್ಧಿ ಬರುತ್ತದೆ ಎಂಬುದಾಗಿ ಆಶ್ರಯಾಸಿದ್ಧಿದೋಷಶಂಕೆ ಬಂದರೆ, ಅದಕ್ಕೆ ಕೇವಲ ವೇದಾದಿಶಾಸ್ತ್ರಂ ಎಂದಷ್ಟೇ ಪಕ್ಷನಿರ್ದೇಶ ಮಾಡುವುದರಿಂದ ಆ ಆಶ್ರಯಾಸಿದ್ಧಿದೋಷದ ಪರಿಹಾರವು ಸೂಚಿತವಾಗುವುದಿಲ್ಲ. ಆದರೆ ವಿಮತಂ ಎಂಬುದಾಗಿ ಪಕ್ಷನಿರ್ದೇಶ ಮಾಡುವುದರಿಂದ ಆ ಆಶ್ರಯಾಸಿದ್ಧಿದೋಷದ ಪರಿಹಾರವು ಸೂಚಿತವಾಗುತ್ತದೆ.

ಅದು ಹೇಗೆ ? ಪಕ್ಷವಾದ ವೇದಾದಿಶಾಸ್ತ್ರವು ವಿಮತವಾಗಿದೆ (ಸಂಶಯಕ್ಕೆ ಧರ್ಮಿಯಾಗಿದೆ) ಎಂದಮೇಲೆ ಅದು ಅಪ್ರಸಿದ್ಧವಾಗಲು ಸಾಧ್ಯವಿಲ್ಲ.

''ಯದಿ ವೇದಾದಿಕಮೇವ ನ ಸ್ಯಾತ್ ತರ್ಹಿ ಆರಂಭಣೀಯತ್ವ-ಅನಾರಂಭಣೀಯತ್ವಾಭ್ಯಾಂ ವಿಮತಿಃ ಕಿಮಾಶ್ರಯಾ ಸ್ಯಾತ್ ? ಕಿಂಧರ್ಮಿಣೀ ಸ್ಯಾತ್? ಕುತ್ರ ಸ್ಯಾದಿತಿ ಯಾವತ್ । ಅಸ್ತಿ ಚೇಯಮ್ । ತಸ್ಮಾನ್ನ ನಿರಾಶ್ರಯತ್ವಮ್ ।''

ಒಂದುವೇಳೆ ವೇದಾದಿಗಳೇ ಅಪ್ರಸಿದ್ಧವಾದದ್ದಾದರೆ ಆರಂಭಣೀಯತ್ವ-ಅನಾರಂಭಣೀಯತ್ವಕೋಟಿಕವಾದ ವಿಮತಿಯು ಯದ್ಧರ್ಮಿಕವಾಗಿ ಬರಬೇಕು ? (ವೇದಾದಿಗಳೇ ಅಪ್ರಸಿದ್ಧವಾಗಿದ್ದರೆ ಧರ್ಮಿಯೇ ಅಪ್ರಸಿದ್ಧವಾದ ಕಾರಣ ಸಂಶಯವೇ ಬರಬಾರದಿತ್ತು ಎಂದು ಭಾವ.) ಈಗಲಾದರೋ ಸಂಶಯ ಬರುತ್ತಿದೆ ಎಂದಮೇಲೆ, ಧರ್ಮಿಯಾದ ವೇದಾದಿಗಳು ಅಪ್ರಸಿದ್ಧವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಆಶ್ರಯಾಸಿದ್ಧಿ ಬರುವುದಿಲ್ಲ.

ಈ ರೀತಿಯಾಗಿ ವಿಮತಶಬ್ದವೇ ನಮಗೆ ಆಶ್ರಯಾಸಿದ್ಧಿಪರಿಹಾರವನ್ನು ಸೂಚಿಸುತ್ತದೆ.

**ವಿಮತಶಬ್ದದಿಂದ ಅಪ್ರಸಿದ್ಧವಿಶೇಷಣತಾ ಪರಿಹಾರಸೂಚನೆ**

ಸಾಧ್ಯವಾದ ಅನಾರಂಭಣೀಯತ್ವವೇ ಅಪ್ರಸಿದ್ಧವಾದ್ದರಿಂದ ನಿಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ಬರುತ್ತದೆ ಎಂಬುದಾಗಿ ಅಪ್ರಸಿದ್ಧವಿಶೇಷಣತಾದೋಷಶಂಕೆ ಬಂದರೆ, ಅದಕ್ಕೆ ಕೇವಲ ವೇದಾದಿಶಾಸ್ತ್ರಂ ಎಂದಷ್ಟೇ ಪಕ್ಷನಿರ್ದೇಶ ಮಾಡುವುದರಿಂದ ಆ ಅಪ್ರಸಿದ್ಧವಿಶೇಷಣತಾದೋಷದ ಪರಿಹಾರವು ಸೂಚಿತವಾಗುವುದಿಲ್ಲ. ಆದರೆ ವಿಮತಂ ಎಂಬುದಾಗಿ ಪಕ್ಷನಿರ್ದೇಶ ಮಾಡುವುದರಿಂದ ಆ ಅಪ್ರಸಿದ್ಧವಿಶೇಷಣತಾ-ದೋಷದ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ಪಕ್ಷವಾದ ವೇದಾದಿಶಾಸ್ತ್ರವು ವಿಮತವಾಗಿದೆ (ಸಂಶಯಕ್ಕೆ ಧರ್ಮಿಯಾಗಿದೆ) ಎಂದಮೇಲೆ, ಸಾಧ್ಯವಾದ (ಸಂಶಯದಲ್ಲಿ ಕೋಟಿಯಾಗಿರುವ) ಅನಾರಂಭಣೀಯತ್ವವು ಅಪ್ರಸಿದ್ಧವಾಗಿರಲು ಸಾಧ್ಯವಿಲ್ಲ.

''ಯದಿ ಅನಾರಂಭಣೀಯತ್ವಂ ಅಪ್ರಸಿದ್ಧಂ ಸ್ಯಾತ್, ತರ್ಹಿ ಆರಂಭಣೀಯತ್ವ-ಅನಾರಂಭಣೀಯತ್ವಾಭ್ಯಾಂ ಕಥಂ ವಿಮತಿಃ ಸ್ಯಾತ್ ? ಏಕಸ್ಯಾಃ ಕೋಟೇಃ ಅಪ್ರಸಿದ್ಧತ್ವಾತ್ । ಅಸ್ತಿ ಚೇಯಮ್ । ತಸ್ಮಾನ್ನ ಅಪ್ರಸಿದ್ಧವಿಶೇಷಣತಾ ।''

ಒಂದುವೇಳೆ ಸಾಧ್ಯವಾದ ಅನಾರಂಭಣೀಯತ್ವವೇ ಅಪ್ರಸಿದ್ಧವಾದದ್ದಾದರೆ ಆರಂಭಣೀಯತ್ವ-ಅನಾರಂಭಣೀಯತ್ವಕೋಟಿಕವಾದ ವಿಮತಿಯು ಹೇಗೆತಾನೇ ಬರಲು ಸಾಧ್ಯ ? (ಒಂದು ಕೋಟಿಯೇ ಅಪ್ರಸಿದ್ಧವಾದ ಕಾರಣ ಸಂಶಯವೇ ಬರಬಾರದಿತ್ತು ಎಂದು ಭಾವ.) ಈಗಲಾದರೋ ಸಂಶಯ ಬರುತ್ತಿದೆ ಎಂದಮೇಲೆ, ಸಾಧ್ಯವಾದ (ಒಂದು ಕೋಟಿಯಾಗಿರುವ) ಅನಾರಂಭಣೀಯತ್ವವು ಅಪ್ರಸಿದ್ಧವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಸಿದ್ಧವಿಶೇಷಣತಾ ಬರುವುದಿಲ್ಲ.

ಈ ರೀತಿಯಾಗಿ ವಿಮತಶಬ್ದವೇ ನಮಗೆ ಅಪ್ರಸಿದ್ಧವಿಶೇಷಣತಾಪರಿಹಾರವನ್ನು ಸೂಚಿಸುತ್ತದೆ.

**ವಿಮತಶಬ್ದದಿಂದ ಸಿದ್ಧಸಾಧನತಾ ಪರಿಹಾರಸೂಚನೆ**

ಪಕ್ಷವಾದ ವೇದಾದಿಶಾಸ್ತ್ರದಲ್ಲಿ ಸಾಧ್ಯವಾದ ಅನಾರಂಭಣೀಯತ್ವವು ನಮಗೆ ಸಿದ್ಧವೇ ಆಗಿರುವುದರಿಂದ ನಿಮ್ಮ ಅನುಮಾನಕ್ಕೆ ಸಿದ್ಧಸಾಧನತಾದೋಷ ಬರುತ್ತದೆ ಎಂಬುದಾಗಿ ಸಿದ್ಧಸಾಧನತಾದೋಷಶಂಕೆ ಬಂದರೆ, ಅದಕ್ಕೆ ಕೇವಲ ವೇದಾದಿಶಾಸ್ತ್ರಂ ಎಂದಷ್ಟೇ ಪಕ್ಷನಿರ್ದೇಶ ಮಾಡುವುದರಿಂದ ಆ ಸಿದ್ಧಸಾಧನತಾದೋಷದ ಪರಿಹಾರವು

ಸೂಚಿತವಾಗುವುದಿಲ್ಲ. ಆದರೆ ವಿಮತಂ ಎಂಬುದಾಗಿ ಪಕ್ಷನಿರ್ದೇಶ ಮಾಡುವುದರಿಂದ ಆ ಸಿದ್ಧಸಾಧನತಾದೋಷದ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ಪಕ್ಷವಾದ ವೇದಾದಿಶಾಸ್ತ್ರವು ವಿಮತವಾಗಿದೆ (ಸಂಶಯಕ್ಕೆ ಧರ್ಮಿಯಾಗಿದೆ) ಎಂದಮೇಲೆ ಸಾಧ್ಯವಾದ ಅನಾರಂಭಣೀಯತ್ವವು ಅಲ್ಲಿ ಸಿದ್ಧವಾಗಿರಲು ಸಾಧ್ಯವಿಲ್ಲ.

''ಯದಿ ಅನಾರಂಭಣೀಯತ್ವಂ ಸಿದ್ಧಂ ಸ್ಯಾತ್ ತರ್ಹಿ ಆರಂಭಣೀಯತ್ವ-ಅನಾರಂಭಣೀಯತ್ವಾಭ್ಯಾಂ ಕಥಂ ವಿಮತಿಃ ಸ್ಯಾತ್ ? ಏಕಸ್ಯಾಃ ಕೋಟೇಃ ಸಿದ್ಧತ್ವಾತ್ । ಅಸ್ತಿ ಚೇಯಮ್ । ತಸ್ಮಾನ್ನ ಸಿದ್ಧಸಾಧನತಾ ।''

ಒಂದುವೇಳೆ ಸಾಧ್ಯವಾದ ಅನಾರಂಭಣೀಯತ್ವವು ಪಕ್ಷದಲ್ಲಿ ಸಿದ್ಧವಾದದ್ದಾದರೆ ಆರಂಭಣೀಯತ್ವ-ಅನಾರಂಭಣೀಯತ್ವಕೋಟಿಕವಾದ ವಿಮತಿಯು ಹೇಗೆತಾನೇ ಬರಲು ಸಾಧ್ಯ ? ಒಂದು ಕೋಟಿಯೇ ಸಿದ್ಧವಾದ ಕಾರಣ (ಸಂಶಯಕ್ಕೆ ವಿರೋಧಿಯಾದ ಅನ್ಯತರಕೋಟಿನಿಶ್ಚಯವು ಇರುವುದರಿಂದ) ಸಂಶಯವೇ ಬರಬಾರದಿತ್ತು ಎಂದು ಭಾವ. ಈಗಲಾದರೋ ಸಂಶಯ ಬರುತ್ತಿದೆ ಎಂದಮೇಲೆ, ಸಾಧ್ಯವಾದ (ಒಂದು ಕೋಟಿಯಾಗಿರುವ) ಅನಾರಂಭಣೀಯತ್ವವು ಸಿದ್ಧವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಸಿದ್ಧಸಾಧನತಾ ಬರುವುದಿಲ್ಲ.

ಈ ರೀತಿಯಾಗಿ ವಿಮತಶಬ್ದವೇ ನಮಗೆ ಸಿದ್ಧಸಾಧನತಾದೋಷಪರಿಹಾರವನ್ನು ಸೂಚಿಸುತ್ತದೆ.

ಹೀಗೆ 'ವಿಮತ'ಶಬ್ದಪ್ರಯೋಗದಿಂದ ಆಶ್ರಾಯಸಿದ್ಧಿ-ಅಪ್ರಸಿದ್ಧವಿಶೇಷಣತಾ-ಸಿದ್ಧಸಾಧನತಾ ದೋಷಗಳ ಪರಿಹಾರವೂ ಸೂಚಿತವಾಗುವುದರಿಂದ, 'ವೇದಾದಿಶಾಸ್ತ್ರಂ' ಎಂದು ಪಕ್ಷನಿರ್ದೇಶ ಮಾಡದೇ 'ವಿಮತಂ' ಎಂದು ಪಕ್ಷನಿರ್ದೇಶ ಮಾಡಿರುವುದು ಸಾರ್ಥಕವಾಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಅನುಮಾನದಲ್ಲಿ ''ಸಂಪ್ರತಿಪನ್ನ'' ಶಬ್ದಪ್ರಯೋಗದ ಪ್ರಯೋಜನವನ್ನು ನಿರೂಪಿಸುತ್ತಾರೆ -

**ಟೀಕಾ :- ಏವಮುಪಾಧ್ಯವೈಕಲ್ಯಾದಿದೋಷಪರಿಹಾರಸೂಚನಾಯ 'ಯಥಾ ಸಂಪ್ರತಿಪನ್ನಮ್' ಇತ್ಯುಕ್ತಮ್ । ಅನ್ಯಥಾ 'ಯಥಾ ಬೌದ್ಧಾದಿಶಾಸ್ತ್ರಮ್' ಇತಿ ಬ್ರೂಯಾತ್ ।।**

**ಅನುವಾದ :-** ಇದೇ ರೀತಿಯಾಗಿ ಆಪಾದ್ಯವೈಕಲ್ಯ ಮೊದಲಾದ ದೋಷಗಳ ಪರಿಹಾರವನ್ನು ಸೂಚಿಸುವುದಕ್ಕಾಗಿ ಅನುಮಾನದಲ್ಲಿ 'ಯಥಾ ಸಂಪ್ರತಿಪನ್ನಮ್' ಎಂದು ಹೇಳಲಾಗಿದೆ. ಒಂದುವೇಳೆ ದೋಷಪರಿಹಾರದ ಸೂಚನೆ ಮಾಡುವ ಅಭಿಪ್ರಾಯ ಇಲ್ಲದಿದ್ದರೆ 'ಯಥಾ ಬೌದ್ಧಾದಿಶಾಸ್ತ್ರಮ್' ಎಂದೇ ಹೇಳುತ್ತಿದ್ದರು.

**ವಿವರಣೆ :-** ಅನುಮಾನದಲ್ಲಿ 'ಯತ್ ಅನ್ಯಥಾಪ್ರತಿಪಾದಕಂ ತತ್ ಅನಾರಂಭಣೀಯಮ್' (ಯಾವುದು ಅನ್ಯಥಾಪ್ರತಿಪಾದಕವಾಗುತ್ತದೆಯೋ ಅದು ಅನಾರಂಭಣೀಯವಾಗುತ್ತದೆ) ಎಂಬ ವ್ಯಾಪ್ತಿಯನ್ನು ತೋರಿಸುವುದಕ್ಕಾಗಿ 'ಯಥಾ ಸಂಪ್ರತಿಪನ್ನಮ್' ಎಂಬುದಾಗಿ ದೃಷ್ಟಾಂತ ಹೇಳಿದ್ದಾರೆ. ಇಲ್ಲಿ ಸಂಪ್ರತಿಪನ್ನಶಬ್ದದಿಂದ ಬೌದ್ಧಾದಿಶಾಸ್ತ್ರವನ್ನು ತೆಗೆದುಕೊಳ್ಳಲಾಗಿದೆ. ಹೀಗೆ ಬೌದ್ಧಾದಿಶಾಸ್ತ್ರವನ್ನೇ ದೃಷ್ಟಾಂತ ಮಾಡುವ ಅಭಿಪ್ರಾಯ ಇದ್ದದ್ದಾದರೆ 'ಯಥಾ ಬೌದ್ಧಾದಿಶಾಸ್ತ್ರಮ್' ಎಂದೇ ಸ್ಪಷ್ಟವಾಗಿ ಹೇಳಬಹುದಿತ್ತಲ್ಲವೇ ? ಅದನ್ನು ಬಿಟ್ಟು 'ಯಥಾ ಸಂಪ್ರತಿಪನ್ನಮ್' ಎಂದೇಕೆ ಶಬ್ದಪ್ರಯೋಗ ಮಾಡಿದ್ದಾರೆ ?

ನಿಜ. ಬೌದ್ಧಾದಿಶಾಸ್ತ್ರವನ್ನು ದೃಷ್ಟಾಂತವಾಗಿ ತಿಳಿಸುವ ಉದ್ದೇಶವಷ್ಟೇ ಇದ್ದಿದ್ದರೆ ಆಗ 'ಯಥಾ ಬೌದ್ಧಾದಿಶಾಸ್ತ್ರಮ್' ಎಂದಷ್ಟೇ ಹೇಳುತ್ತಿದ್ದರು. ಆದರೆ ಪ್ರಕೃತದಲ್ಲಿ ಬೌದ್ಧಾದಿಶಾಸ್ತ್ರವನ್ನು ದೃಷ್ಟಾಂತವಾಗಿ ತಿಳಿಸುವ ಉದ್ದೇಶ ಮಾತ್ರ ಇಲ್ಲ. ಕಿಂತು ಆಪಾದ್ಯವೈಕಲ್ಯ (ಸಾಧ್ಯವೈಕಲ್ಯ), ದೃಷ್ಟಾಂತಾಪ್ರಸಿದ್ಧಿ ದೋಷಗಳ ಪರಿಹಾರಸೂಚನೆಯೂ ಆಗಬೇಕಿದೆ. ಅದಕ್ಕಾಗಿ 'ಯಥಾ ಸಂಪ್ರತಿಪನ್ನಮ್' ಎಂದು ಶಬ್ದಪ್ರಯೋಗ ಮಾಡಲಾಗಿದೆ.

ಅದು ಹೇಗೆ ?

**ಸಂಪ್ರತಿಪನ್ನ ಶಬ್ದದಿಂದ 'ದೃಷ್ಟಾಂತಾಪ್ರಸಿದ್ಧಿ'ದೋಷಪರಿಹಾರಸೂಚನೆ**

ದೃಷ್ಟಾಂತವನ್ನಾಗಿ ಉದಾಹರಿಸಿರುವ ಬೌದ್ಧಾದಿಶಾಸ್ತ್ರವೇ ಅಪ್ರಸಿದ್ಧವಾದ್ದರಿಂದ ನಿಮ್ಮ ಅನುಮಾನಕ್ಕೆ ದೃಷ್ಟಾಂತಾಪ್ರಸಿದ್ಧಿ ಎಂಬ ದೋಷ ಬರುತ್ತದೆ ಎಂಬುದಾಗಿ ದೃಷ್ಟಾಂತಾಸಿದ್ಧಿದೋಷಶಂಕೆ ಬಂದರೆ, ಅದಕ್ಕೆ ಕೇವಲ 'ಯಥಾ ಬೌದ್ಧಾದಿಶಾಸ್ತ್ರಮ್' ಎಂದಷ್ಟೇ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ದೃಷ್ಟಾಂತಾಸಿದ್ಧಿದೋಷದ ಪರಿಹಾರವು ಸೂಚಿತವಾಗುವುದಿಲ್ಲ. ಆದರೆ 'ಯಥಾ ಸಂಪ್ರತಿಪನ್ನಮ್' ಎಂಬುದಾಗಿ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ದೃಷ್ಟಾಂತಾಸಿದ್ಧಿದೋಷದ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ದೃಷ್ಟಾಂತವಾದ ಬೌದ್ಧಾದಿಶಾಸ್ತ್ರವು ಸಂಪ್ರತಿಪನ್ನವಾಗಿದೆ. (ಸಂಪ್ರತಿಪತ್ತಿಗೆ ವಿಷಯವಾಗಿದೆ - ಸಾಧ್ಯಹೇತುಗಳು ಅಲ್ಲಿ ಇವೆ ಎಂಬುದಾಗಿ ಇಬ್ಬರು ವಾದಿಗಳಿಗೂ ಸಮ್ಮತವಾಗಿದೆ.) ಅಂದಮೇಲೆ ಅದು ಅಪ್ರಸಿದ್ಧವಾಗಿರಲು ಸಾಧ್ಯವಿಲ್ಲ.

''ಯದಿ ಬೌದ್ಧಾದಿಶಾಸ್ತ್ರಮೇವ ನ ಸ್ಯಾತ್ ತರ್ಹಿ ಆವಯೋಃ ಅನಾರಂಭಣೀಯತ್ವೇನ ಸಂಪ್ರತಿಪತ್ತಿಃ ಕುತ್ರ ಸ್ಯಾತ್ ? ಅಸ್ತಿ ಚೇಯಮ್ । ತಸ್ಮಾನ್ನ ದೃಷ್ಟಾಂತಾಪ್ರಸಿದ್ಧಿಃ ।''

ಒಂದುವೇಳೆ ದೃಷ್ಟಾಂತವಾದ ಬೌದ್ಧಾದಿಶಾಸ್ತ್ರವೇ ಅಪ್ರಸಿದ್ಧವಾಗಿದ್ದಾದರೆ ನಮ್ಮಿಬ್ಬರಿಗೆ (ವಾದಿ-ಪ್ರತಿವಾದಿಗಳಿಗೆ) ಅನಾರಂಭಣೀಯತ್ವೇನ ಸಂಪ್ರತಿಪತ್ತಿಯು (ಅನಾರಂಭಣೀಯವಾಗಿದೆ ಎಂದು ಸಮ್ಮತಿಯು) ಎಲ್ಲಿ ಆಗಬೇಕು ? (ಯಾವ ಶಾಸ್ತ್ರದಲ್ಲಿ ಆಗಬೇಕು ?) ಈಗಲಾದರೋ ಬೌದ್ಧಾದಿಶಾಸ್ತ್ರವು ಅನಾರಂಭಣೀಯವಾಗಿದೆ ಎಂಬುದಾಗಿ ಇಬ್ಬರಿಗೂ ಸಂಪ್ರತಿಪತ್ತಿ ಇದೆ ಎಂದಮೇಲೆ, ದೃಷ್ಟಾಂತವಾದ ಬೌದ್ಧಾದಿಶಾಸ್ತ್ರವು ಅಪ್ರಸಿದ್ಧವಾಗಿರಲು ಸಾಧ್ಯವಿಲ್ಲ. ಆದ್ದರಿಂದ ದೃಷ್ಟಾಂತಾಪ್ರಸಿದ್ಧಿದೋಷ ಬರುವುದಿಲ್ಲ.

ಈ ರೀತಿಯಾಗಿ ಸಂಪ್ರತಿಪನ್ನಶಬ್ದವೇ ನಮಗೆ ದೃಷ್ಟಾಂತಾಪ್ರಸಿದ್ಧಿದೋಷದ ಪರಿಹಾರವನ್ನು ಸೂಚಿಸುತ್ತದೆ.

**ಸಂಪ್ರತಿಪನ್ನ ಶಬ್ದದಿಂದ 'ಸಾಧ್ಯವೈಕಲ್ಯ'ದೋಷಪರಿಹಾರಸೂಚನೆ**

ಇನ್ನು ಅದೇ ರೀತಿಯಾಗಿ, ದೃಷ್ಟಾಂತ ಮಾಡಿರುವ ಬೌದ್ಧಾದಿಶಾಸ್ತ್ರದಲ್ಲಿ ಸಾಧ್ಯವಾದ ಅನಾರಂಭಣೀಯತ್ವವನ್ನು ಒಪ್ಪಿಲ್ಲವಾದ್ದರಿಂದ ನಿಮ್ಮ ಅನುಮಾನಕ್ಕೆ ಸಾಧ್ಯವೈಕಲ್ಯ (ಆಪಾದ್ಯವೈಕಲ್ಯ) ದೋಷ ಬರುತ್ತದೆ ಎಂಬುದಾಗಿ ಸಾಧ್ಯವೈಕಲ್ಯದೋಷಶಂಕೆ ಬಂದರೆ, ಅದಕ್ಕೆ ಕೇವಲ 'ಯಥಾ ಬೌದ್ಧಾದಿಶಾಸ್ತ್ರಮ್' ಎಂದಷ್ಟೇ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ಸಾಧ್ಯವೈಕಲ್ಯದೋಷದ ಪರಿಹಾರವು ಸೂಚಿತವಾಗುವುದಿಲ್ಲ. ಆದರೆ 'ಯಥಾ ಸಂಪ್ರತಿಪನ್ನಮ್' ಎಂಬುದಾಗಿ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ಸಾಧ್ಯವೈಕಲ್ಯದೋಷದ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ದೃಷ್ಟಾಂತವಾದ ಬೌದ್ಧಾದಿಶಾಸ್ತ್ರವು ಸಂಪ್ರತಿಪನ್ನವಾಗಿದೆ (ಸಾಧ್ಯಹೇತುಗಳು ಅಲ್ಲಿ ಇವೆ ಎಂಬುದಾಗಿ ಇಬ್ಬರು ವಾದಿಗಳಿಗೂ ಸಮ್ಮತವಾಗಿದೆ) ಎಂದಮೇಲೆ ''ದೃಷ್ಟಾಂತದಲ್ಲಿ ಸಾಧ್ಯವಿಲ್ಲವಾದ್ದರಿಂದ ಸಾಧ್ಯವೈಕಲ್ಯ'' ಎಂದು ಶಂಕಿಸಲು ಸಾಧ್ಯವಿಲ್ಲ.

''ಯದಿ ಅಪಾದ್ಯಂ ಅನಾರಂಭಣೀಯತ್ವಂ ಬೌದ್ಧಶಾಸ್ತ್ರೇ ನ ಸ್ಯಾತ್, ತದಾ ಕೇನ ಧರ್ಮೇಣ ಸಂಪ್ರತಿಪತ್ತಿಃ ಸ್ಯಾತ್ ? ಅಸ್ತಿ ಚೇಯಮ್ । ತಸ್ಮಾನ್ನಾಪಾದ್ಯವೈಕಲ್ಯಮ್।''

ಒಂದುವೇಳೆ ಸಾಧ್ಯವಾದ ಅನಾರಂಭಣೀಯತ್ವವು ದೃಷ್ಟಾಂತವಾದ ಬೌದ್ಧಶಾಸ್ತ್ರದಲ್ಲಿ ಇಲ್ಲ ಎಂದಾಗಿದ್ದರೆ, ಆಗ ಯಾವ ಧರ್ಮದಿಂದ ಸಂಪ್ರತಿಪತ್ತಿ ಕೂಡಬೇಕು ? (ಸಾಧ್ಯಹೇತುಗಳು ಅಲ್ಲಿ ಇವೆ ಎಂಬುದಾಗಿ ಇಬ್ಬರು ವಾದಿಗಳಿಗೂ ಸಮ್ಮತಿಯು ಹೇಗೆ ಉಪಪನ್ನವಾಗುತ್ತದೆ ?) ಈಗಲಾದರೋ ಬೌದ್ಧಾದಿಶಾಸ್ತ್ರದಲ್ಲಿ ಸಾಧ್ಯ-ಹೇತುಗಳು ಇವೆ ಎಂಬುದಾಗಿ ಇಬ್ಬರಿಗೂ ಸಂಪ್ರತಿಪತ್ತಿ ಇದೆ ಎಂದಮೇಲೆ, ''ದೃಷ್ಟಾಂತವಾದ ಬೌದ್ಧಾದಿಶಾಸ್ತ್ರದಲ್ಲಿ ಸಾಧ್ಯವಾದ ಅನಾರಂಭಣೀಯತ್ವವು ಇಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆ'' ಎಂಬುದಾಗಿ ಶಂಕಿಸಲು ಸಾಧ್ಯವಿಲ್ಲ. ಆದ್ದರಿಂದ ಸಾಧ್ಯವೈಕಲ್ಯದೋಷ ಬರುವುದಿಲ್ಲ.

ಹೀಗೆ ಸಂಪ್ರತಿಪನ್ನಶಬ್ದವೇ ನಮಗೆ ಸಾಧ್ಯವೈಕಲ್ಯದೋಷದ ಪರಿಹಾರವನ್ನು ಸೂಚಿಸುತ್ತದೆ.

ಈ ರೀತಿಯಾಗಿ ದೃಷ್ಟಾಂತಾಪ್ರಸಿದ್ಧಿ-ಸಾಧ್ಯವೈಕಲ್ಯ ದೋಷಗಳ ಪರಿಹಾರಸೂಚನೆ ಎಂಬ ಪ್ರಯೋಜನ ಇರುವುದರಿಂದ, 'ಯಥಾ ಬೌದ್ಧಾದಿಶಾಸ್ತ್ರಮ್' ಎಂದು ದೃಷ್ಟಾಂತನಿರ್ದೇಶ ಮಾಡದೇ 'ಯಥಾ ಸಂಪ್ರತಿಪನ್ನಮ್' ಎಂಬುದಾಗಿ ದೃಷ್ಟಾಂತನಿರ್ದೇಶ ಮಾಡಿರುವುದು ಸಾರ್ಥಕವೇ ಆಗಿದೆ ಎಂದು ಭಾವ.

**ಅವತಾರಿಕೆ :-** 'ವಿಮತಂ ಅನಾರಂಭಣೀಯಂ' ಎಂಬ ಅನುಮಾನದಲ್ಲಿ ಅನಾರಂಭಣೀಯತ್ವವು ಸಾಧ್ಯವಾಗಿದೆ. ಇಲ್ಲಿ ಅನಾರಂಭಣೀಯತ್ವ ಎಂದರೆ ಏನು ? ಎಂಬುದನ್ನು ಆಕ್ಷೇಪಪೂರ್ವಕವಾಗಿ ವಿವೇಚಿಸುತ್ತಾರೆ -

**ಟೀಕಾ :- ನನ್ವನಾರಂಭಣೀಯತ್ವಂ ನಾಮ ಅಪ್ರಣೇತವ್ಯತ್ವಂ ವಾ ? ಅಶ್ರೋತವ್ಯತ್ವಾದಿಕಂ ವಾ ? ಆದ್ಯೇ ತ್ವಿಷ್ಟಾಪಾದನಮ್ । ವೇದಸ್ಯಾಪ್ರಣೇತವ್ಯ-ತ್ವಾತ್ । ನ ದ್ವಿತೀಯಃ । ಬೌದ್ಧಾದಿಶಾಸ್ತ್ರಶ್ರವಣಸ್ಯಾಪಿ ದರ್ಶನಾತ್ । ಮೈವಮ್ । ಪ್ರೇಕ್ಷಾವದುಪಾದೇಯತ್ವಾಭಾವಸ್ಯ ವಿವಕ್ಷಿತತ್ವಾತ್ ।**

**ಅನುವಾದ :-** ಅನಾರಂಭಣೀಯತ್ವ ಎಂದರೆ ಅಪ್ರಣೇತವ್ಯತ್ವ (ಪ್ರಣಯನ ಅಯೋಗ್ಯತ್ವ - ರಚನೆ ಮಾಡಲು ಯೋಗ್ಯವಲ್ಲ) ಎಂದು ಅರ್ಥವೋ ? ಅಥವಾ ಅಶ್ರೋತವ್ಯತ್ವ (ಶ್ರವಣ ಅಯೋಗ್ಯತ್ವ - ಶ್ರವಣ ಮಾಡಲು ಯೋಗ್ಯವಲ್ಲ) ಎಂದು ಅರ್ಥವೋ ?

(ಆದಿಪದದಿಂದ ''ಅನುಪಾದೇಯತ್ವ ಎಂದು ಅರ್ಥವೋ ? '' ಎಂಬ ಮೂರನೇ ಪಕ್ಷವನ್ನು ವಿಕಲ್ಪದಲ್ಲಿ ತೆಗೆದುಕೊಳ್ಳಬೇಕು.)

ಅನಾರಂಭಣೀಯತ್ವ ಎಂದರೆ ಅಪ್ರಣೇತವ್ಯತ್ವ ಎಂದು ಅರ್ಥ ಹೇಳುವುದಾದರೆ, ವೇದವು ಅಪ್ರಣೇತವ್ಯವೇ (ಅಪೌರುಷೇಯವೇ) ಆಗಿರುವುದರಿಂದ ನಿಮ್ಮ ಆಪಾದನೆಯು ಇಷ್ಟಾಪಾದನವಾಗುತ್ತದೆ. ಇನ್ನು, ಬೌದ್ಧರೇ ಮೊದಲಾದವರು ಬೌದ್ಧಾದಿಶಾಸ್ತ್ರಗಳ ಶ್ರವಣ ಮಾಡುವುದು ಕಂಡಿದ್ದರಿಂದ ಅಶ್ರೋತವ್ಯತ್ವ ಎಂಬ ಎರಡನೇ ಅರ್ಥವೂ ಸರಿಯಲ್ಲ ಎಂದು ಆಕ್ಷೇಪ ಬಂದರೆ, ಅದು ಸರಿಯಲ್ಲ. ಕಾರಣ - ಅನಾರಂಭಣೀಯತ್ವ ಎಂದರೆ ಈ ಯಾವ ಅರ್ಥವನ್ನೂ ವಿವಕ್ಷಿಸುವುದಿಲ್ಲ. ಪರಂತು ಪ್ರೇಕ್ಷಾವದುಪಾದೇಯತ್ವಾಭಾವ ಎಂದು ಅರ್ಥವನ್ನು ವಿವಕ್ಷಿಸಿದ್ದೇವೆ.

**ವಿವರಣೆ :-** ಇಲ್ಲಿ ಅನಾರಂಭಣೀಯತ್ವ ಎಂದರೆ ಅಪ್ರಣೇತವ್ಯತ್ವ (ಪ್ರಣಯನ ಅಯೋಗ್ಯತ್ವ - ರಚನೆ ಮಾಡಲು ಯೋಗ್ಯವಲ್ಲ) ಎಂದು ಅರ್ಥ ಹೇಳುತ್ತೀರೋ ? ಅಥವಾ ಅಶ್ರೋತವ್ಯತ್ವ (ಶ್ರವಣ ಅಯೋಗ್ಯತ್ವ - ಶ್ರವಣ ಮಾಡಲು ಯೋಗ್ಯವಲ್ಲ) ಎಂದು ಅರ್ಥ ಹೇಳುತ್ತೀರೋ ? ಅಥವಾ ಅನುಪಾದೇಯತ್ವ (ಸ್ವೀಕಾರ ಮಾಡಲು ಯೋಗ್ಯವಲ್ಲ) ಎಂದು ಅರ್ಥ ಹೇಳುತ್ತೀರೋ ?

1) ಅನಾರಂಭಣೀಯತ್ವ ಎಂದರೆ ಅಪ್ರಣೇತವ್ಯತ್ವ ಎಂದು ಅರ್ಥ ಮಾಡುವುದು ಸರಿಯಲ್ಲ. ಏಕೆಂದರೆ ಹಾಗೆ ಅರ್ಥ ಮಾಡಿದಾಗ -

''ಯದಿ ವೇದಃ ಅನ್ಯಥಾಪ್ರತಿಪಾದಕಃ ಸ್ಯಾತ್ ತರ್ಹಿ ಅಪ್ರಣೇತವ್ಯಃ ಸ್ಯಾತ್ '' (ಒಂದುವೇಳೆ ವೇದವು ಅನ್ಯಥಾಪ್ರತಿಪಾದಕವಾಗುವುದಾದರೆ ಆಗ ಅಪ್ರಣೇತವ್ಯ ಆಗಬೇಕಾಗುತ್ತದೆ)

ಎಂಬುದಾಗಿ ಆಪಾದನೆ ಮಾಡಿದಂತಾಗುತ್ತದೆ. ಆಪಾದನೆ ಮಾಡಿದಾಗ (ಆಪಾದ್ಯಸ್ಯ ಅನಿಷ್ಟತ್ವ ಎನ್ನುವುದೂ ಒಂದು ತರ್ಕದ ಅಂಗವಾದ್ದರಿಂದ) ಆಪಾದ್ಯವು ಅನಿಷ್ಟವಾಗಿರಬೇಕು. ಹೀಗೆ ಆಪಾದನೆ ಮಾಡಿದಾಗ ವೇದಕ್ಕೆ ಅಪ್ರಣೇತವ್ಯತ್ವವು ಆಪಾದ್ಯವಾಗುತ್ತದೆ. ಆದರೆ ವೇದವು ಅಪೌರುಷೇಯವಾಗಿರುವುದರಿಂದ ಅದು ಪ್ರಣೇತವ್ಯವೇ ಅಲ್ಲ. (ರಚನೆ ಮಾಡಲು ಯೋಗ್ಯವೇ ಅಲ್ಲ.) ಹಾಗಾಗಿ ''ವೇದಃ ಅಪ್ರಣೇತವ್ಯಃ ಸ್ಯಾತ್'' ಎಂಬುದಾಗಿ ಅಪ್ರಣೇತವ್ಯತ್ವವನ್ನು ಆಪಾದನೆ ಮಾಡಿದರೆ ನಿಮ್ಮ ಆಪಾದನವು ಇಷ್ಟಾಪಾದನವಾಗುತ್ತದೆ. ಆದ್ದರಿಂದ ಅನಾರಂಭಣೀಯತ್ವ ಎಂದರೆ ಅಪ್ರಣೇತವ್ಯತ್ವ ಎಂದು ಅರ್ಥ ಮಾಡುವುದು ಯುಕ್ತವಲ್ಲ.

2) ಇನ್ನು ಅನಾರಂಭಣೀಯತ್ವ ಎಂದರೆ ಅಶ್ರೋತವ್ಯತ್ವ ಎಂದು ಅರ್ಥ ಮಾಡುವುದೂ ಸರಿಯಲ್ಲ. ಏಕೆಂದರೆ ಹಾಗೆ ಅರ್ಥ ಮಾಡಿದಾಗ -

ವಿಮತಂ **ಅಶ್ರೋತವ್ಯಂ** ಅನ್ಯಥಾಪ್ರತಿಪಾದಕತ್ವಾತ್ ಯಥಾ ಸಂಪ್ರತಿಪನ್ನಮ್ (ಬೌದ್ಧಾದಿಶಾಸ್ತ್ರಮ್) ॥

ಎಂದು ಅನುಮಾನ ಮಾಡಿದಂತಾಗುತ್ತದೆ. ಆದರೆ ಬೌದ್ಧರೇ ಮೊದಲಾದವರು ಬೌದ್ಧಾದಿಶಾಸ್ತ್ರಗಳನ್ನು ಶ್ರವಣ ಮಾಡುತ್ತಾರಾದ್ದರಿಂದ ಬೌದ್ಧಾದಿಶಾಸ್ತ್ರವು ಶ್ರೋತವ್ಯವೇ ಆಗಿದೆ. ಹಾಗಾಗಿ ದೃಷ್ಟಾಂತವಾದ ಬೌದ್ಧಾದಿಶಾಸ್ತ್ರದಲ್ಲಿ ಸಾಧ್ಯವಾದ ಅಶ್ರೋತವ್ಯತ್ವವು ಇಲ್ಲದ ಕಾರಣ ಅನುಮಾನಕ್ಕೆ ಸಾಧ್ಯವೈಕಲ್ಯದೋಷ ಬರುತ್ತದೆ. ಆದ್ದರಿಂದ ಅನಾರಂಭಣೀಯತ್ವ ಎಂದರೆ ಅಶ್ರೋತವ್ಯತ್ವ ಎಂದು ಅರ್ಥ ಮಾಡುವುದೂ ಯುಕ್ತವಲ್ಲ.

3) ಕೊನೆಯದಾಗಿ, ಅನಾರಂಭಣೀಯತ್ವ ಎಂದರೆ ಅನುಪಾದೇಯತ್ವ ಎಂದು ಅರ್ಥ ಮಾಡುವುದೂ ಸರಿಯಲ್ಲ. ಏಕೆಂದರೆ ಹಾಗೆ ಅರ್ಥ ಮಾಡಿದಾಗ -

ವಿಮತಂ **ಅನುಪಾದೇಯಂ** ಅನ್ಯಥಾಪ್ರತಿಪಾದಕತ್ವಾತ್ ಯಥಾ ಸಂಪ್ರತಿಪನ್ನಮ್ (ಬೌದ್ಧಾದಿಶಾಸ್ತ್ರಮ್) ॥

ಎಂದು ಅನುಮಾನ ಮಾಡಿದಂತಾಗುತ್ತದೆ. ಆದರೆ ಬೌದ್ಧರೇ ಮೊದಲಾದವರು ಬೌದ್ಧಾದಿಶಾಸ್ತ್ರಗಳನ್ನು ಸ್ವೀಕಾರ ಮಾಡುತ್ತಾರಾದ್ದರಿಂದ ಬೌದ್ಧಾದಿಶಾಸ್ತ್ರವು ಉಪಾದೇಯವೇ ಆಗಿದೆ. ಹಾಗಾಗಿ ದೃಷ್ಟಾಂತವಾದ ಬೌದ್ಧಾದಿಶಾಸ್ತ್ರದಲ್ಲಿ ಸಾಧ್ಯವಾದ ಅನುಪಾದೇಯತ್ವವು ಇಲ್ಲದ ಕಾರಣ ಅನುಮಾನಕ್ಕೆ ಸಾಧ್ಯವೈಕಲ್ಯದೋಷ ಬರುತ್ತದೆ. ಆದ್ದರಿಂದ ಅನಾರಂಭಣೀಯತ್ವ ಎಂದರೆ ಅನುಪಾದೇಯತ್ವ ಎಂದು ಅರ್ಥ ಮಾಡುವುದೂ ಯುಕ್ತವಾಗುವುದಿಲ್ಲ. ಆದ್ದರಿಂದ ಅನಾರಂಭಣೀಯತ್ವ ಎಂದರೆ ಏನು ಅರ್ಥ ಹೇಳುತ್ತೀರಿ?

ಈ ರೀತಿಯಾಗಿ ಆಕ್ಷೇಪ ಬಂದರೆ, ಅದು ಸರಿಯಲ್ಲ. ಕಾರಣ - ಅನಾರಂಭಣೀಯತ್ವ ಎಂಬುದಕ್ಕೆ ಅಪ್ರಣೇತವ್ಯತ್ವ-ಅಶ್ರೋತವ್ಯತ್ವ-ಅನುಪಾದೇಯತ್ವ ಎಂಬ ಯಾವ ಅರ್ಥಗಳನ್ನೂ ಹೇಳುವುದಿಲ್ಲ. ಕಿಂತು ಪ್ರೇಕ್ಷಾವದುಪಾದೇಯತ್ವಾಭಾವ (ಪ್ರೇಕ್ಷಾವಂತರಿಂದ ಸ್ವೀಕಾರ ಮಾಡಲು ಯೋಗ್ಯವಲ್ಲ) ಎಂದು ಅರ್ಥ ಹೇಳುತ್ತೇವೆ.

ಹೀಗೆ ಅರ್ಥ ಮಾಡಿದಾಗ ಹಿಂದೆ ಶಂಕಿಸಿದ ಯಾವ ದೋಷಗಳಿಗೂ ಅವಕಾಶವಿರುವುದಿಲ್ಲ. ಹೇಗೆಂದರೆ -

1) ಹೀಗೆ ಅರ್ಥ ಮಾಡಿದಾಗ -

''ಯದಿ ವೇದಃ ಅನ್ಯಥಾಪ್ರತಿಪಾದಕಃ ಸ್ಯಾತ್, ತರ್ಹಿ ಪ್ರೇಕ್ಷಾವದನುಪಾದೇಯಃ ಸ್ಯಾತ್'' (ಒಂದುವೇಳೆ ವೇದವು ಅನ್ಯಥಾಪ್ರತಿಪಾದಕವಾಗುವುದಾದರೆ ಆಗ ಪ್ರೇಕ್ಷವಂತರಿಂದ (ಸ್ವೀಕರಿಸಲು ಅಯೋಗ್ಯ) ಅನುಪಾದೇಯ ಆಗಬೇಕಾಗುತ್ತದೆ)

ಎಂದು ಆಪಾದನೆ ಮಾಡಿದಂತಾಗುತ್ತದೆ. ಅರ್ಥಾತ್ ವೇದಕ್ಕೆ ಪ್ರೇಕ್ಷಾವದನುಪಾದೇಯತ್ವವು ಆಪಾದ್ಯವಾಗುತ್ತದೆ. ವೇದವು ಪ್ರೇಕ್ಷಾವಂತರಿಂದ ಉಪಾದೇಯವೇ ಆಗಿರುವುದರಿಂದ, ವೇದಕ್ಕೆ ಪ್ರೇಕ್ಷಾವದನುಪಾದೇಯತ್ವವು ಅನಿಷ್ಟವಾಗಿದೆ. ಹಾಗಾಗಿ ''ವೇದಃ ಪ್ರೇಕ್ಷಾವದನುಪಾದೇಯಃ ಸ್ಯಾತ್'' ಎಂಬುದಾಗಿ ವೇದಕ್ಕೆ ಪ್ರೇಕ್ಷಾವದನುಪಾದೇಯತ್ವವನ್ನು ಆಪಾದನೆ ಮಾಡಿದರೆ ಈ ಆಪಾದನವು ಇಷ್ಟಾಪಾದನ ಆಗುವುದಿಲ್ಲ. ಕಿಂತು ಅನಿಷ್ಟಾಪಾದನವೇ ಆಗುತ್ತದೆ.

2) 3) ಮತ್ತು ಅನಾರಂಭಣೀಯತ್ವ ಎಂದರೆ ಅಶ್ರೋತವ್ಯತ್ವ - ಅನುಪಾದೇಯತ್ವ ಎಂದು ಅರ್ಥ ಮಾಡಿದಾಗ -

ವಿಮತಂ ಅಶ್ರೋತವ್ಯಂ ಅನ್ಯಥಾಪ್ರತಿಪಾದಕತ್ವಾತ್ ಯಥಾ ಬೌದ್ಧಾದಿಶಾಸ್ತ್ರಮ್

ವಿಮತಂ ಅನುಪಾದೇಯಂ ಅನ್ಯಥಾಪ್ರತಿಪಾದಕತ್ವಾತ್ ಯಥಾ ಬೌದ್ಧಾದಿಶಾಸ್ತ್ರಮ್

ಎಂಬ ಅನುಮಾನಗಳಲ್ಲಿ ದೃಷ್ಟಾಂತವಾದ ಬೌದ್ಧಾದಿಶಾಸ್ತ್ರಗಳಲ್ಲಿ ಸಾಧ್ಯವಾದ ಅಶ್ರೋತವ್ಯತ್ವವು ಹಾಗೂ ಅನುಪಾದೇಯತ್ವವು ಬಾರದ ಕಾರಣ ಸಾಧ್ಯವೈಕಲ್ಯ ಬರುತ್ತದೆ ಎಂದು ಶಂಕಿಸಲು ಅವಕಾಶವಿತ್ತು. ಆದರೆ ಅನಾರಂಭಣೀಯತ್ವ ಎಂದರೆ ಪ್ರೇಕ್ಷಾವದನುಪಾದೇಯತ್ವ ಎಂದು ಅರ್ಥ ಮಾಡಿರುವುದರಿಂದ ಸಾಧ್ಯವೈಕಲ್ಯಶಂಕೆಗೆ ಅವಕಾಶವಿಲ್ಲ.

ಅಂದರೆ :- ತತ್ತ್ವವಿಷಯದಲ್ಲಿ ಬೌದ್ಧಾದಿಗಳು ಪ್ರೇಕ್ಷಾವಂತರಲ್ಲ (ಪ್ರೇಕ್ಷಾರಹಿತರು) ಎಂದು ಉಭಯವಾದಿಸಿದ್ಧವಾದ್ದರಿಂದ ದೃಷ್ಟಾಂತವಾದ ಬೌದ್ಧಾದಿಶಾಸ್ತ್ರದಲ್ಲಿ ''ಪ್ರೇಕ್ಷಾವದ್ಭಿಃ ತದುಕ್ತಫಲಸಾಧನತ್ವಬುದ್ಧ್ಯಾ ಶ್ರೂಯಮಾಣತ್ವಾದಿ'' ರೂಪವಾದ ಪ್ರೇಕ್ಷಾವದುಪಾದೇಯತ್ವವು ಇಲ್ಲವಾದ್ದರಿಂದ, 'ಪ್ರೇಕ್ಷಾವದನುಪಾದೇಯತ್ವ'ರೂಪ

ಅನಾರಂಭಣೀಯತ್ವವು (ಸಾಧ್ಯವು) ಇದ್ದೇ ಇದೆಯಾದ್ದರಿಂದ ಸಾಧ್ಯವೈಕಲ್ಯಕ್ಕೆ ಅವಕಾಶವಿಲ್ಲ. ಆದ್ದರಿಂದ ಅನಾರಂಭಣೀಯತ್ವ ಎಂಬುದಕ್ಕೆ ಪ್ರೇಕ್ಷಾವದು-ಪಾದೇಯತ್ವಾಭಾವ ಎಂದು ಅರ್ಥ ಮಾಡುವುದರಿಂದ ಯಾವ ದೋಷವೂ ಬರುವುದಿಲ್ಲ.

**ಅವತಾರಿಕೆ :-** 'ವಿಮತಂ (ವೇದತನ್ಮೀಮಾಂಸಾಶಾಸ್ತ್ರಂ) ಅನಾರಂಭಣೀಯಂ' ಎಂಬುದಾಗಿ ವೇದಾದಿಶಾಸ್ತ್ರಗಳಿಗೆ ಅನಾರಂಭಣೀಯತ್ವವನ್ನು ಸಾಧನೆ ಮಾಡುವುದಾದರೆ, ನಿಮ್ಮ ಪೂರ್ವಜರು ವೇದಾದಿಶಾಸ್ತ್ರಗಳಿಗೆ ಆರಂಭಣೀಯತ್ವವನ್ನೇ ಅಂಗೀಕರಿಸಿದ್ದರಿಂದ ಪ್ರಕೃತ ಅದಕ್ಕೆ ವಿರುದ್ಧವಾಗಿ ಅನಾರಂಭಣೀಯತ್ವವನ್ನು ಸಾಧನೆ ಮಾಡಿದಂತಾಗುವುದರಿಂದ ನಿಮಗೆ ಅಪಸಿದ್ಧಾಂತದೋಷ ಬರುತ್ತದೆ. ಹಾಗೂ ವೇದಾದಿಶಾಸ್ತ್ರಗಳಲ್ಲಿ ಅನಾರಂಭಣೀಯತ್ವಾಭಾವವೇ (ಆರಂಭಣೀಯತ್ವವೇ) ಪ್ರಮಾಣಗಳಿಂದ ಸಿದ್ಧವಾಗಿರುವುದರಿಂದ ಪ್ರಕೃತ ಅದಕ್ಕೆ ವಿರುದ್ಧವಾಗಿ ಅನಾರಂಭಣೀಯತ್ವವನ್ನು ಸಾಧಿಸುವುದಾದರೆ ನಿಮಗೆ ಪ್ರಮಾಣಬಾಧವೂ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ ಅದಕ್ಕೆ ಉತ್ತರ ನೀಡುತ್ತಾರೆ -

**ಟೀಕಾ :- ಸ್ಯಾದಿತಿ ಪ್ರತಿಜ್ಞಾವಾಕ್ಯಶೇಷಃ । ತಥಾ ಚ 'ಯದಿ ವೇದಾದಿಕಂ ಜೀವಬ್ರಹ್ಮಣೋರೈಕ್ಯಪ್ರತಿಪಾದಕಂ ಸ್ಯಾತ್ ತದಾ ಅನಾರಂಭಣೀಯಂ ಪ್ರಸಜ್ಯೇತ' ಇತ್ಯುಕ್ತಂ ಭವತಿ ।**

**ಅನುವಾದ :-** 'ಸ್ಯಾತ್' ಎಂದು ಪ್ರತಿಜ್ಞಾವಾಕ್ಯದಲ್ಲಿ ಶೇಷ ಮಾಡಿಕೊಳ್ಳಬೇಕು. ಹಾಗಾದರೆ ''ಒಂದುವೇಳೆ ವೇದಾದಿಗಳು ಜೀವ-ಬ್ರಹ್ಮರಿಗೆ ಐಕ್ಯಪ್ರತಿಪಾದಕ-ವಾಗುವುದಾದರೆ ಆಗ ಅನಾರಂಭಣೀಯ ಆಗಬೇಕಾಗುತ್ತದೆ'' ಎಂದು ಹೇಳಿದಂತಾಗುತ್ತದೆ.

**ವಿವರಣೆ :-** 'ವಿಮತಂ ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್' ಎಂಬ ನಾವು ಮಾಡಿರುವ ಈ ಅನುಮಾನ ಅದು ಸಾಧನಾನುಮಾನ ಅಲ್ಲ. ಅಂದರೆ, 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಅನುಮಾನದಿಂದ ಪರ್ವತದಲ್ಲಿ ವಹ್ನಿಯನ್ನು ಹೇಗೆ ಸಾಧಿಸುತ್ತೇವೆಯೋ ಅದರಂತೆ ಅನ್ಯಥಾಪ್ರತಿಪಾದಕತ್ವಹೇತುವಿನಿಂದ ವೇದಾದಿಶಾಸ್ತ್ರಗಳಿಗೆ ಅನಾರಂಭಣೀಯತ್ವವನ್ನು ನಾವು ಸಾಧನೆ ಮಾಡುತ್ತಿಲ್ಲ. ಒಂದುವೇಳೆ ಹಾಗೆ ಸಾಧನೆ ಮಾಡುತ್ತಿದ್ದರೆ ಆಗ ಹಿಂದೆ ಶಂಕಿಸಿದಂತೆ ಅಪಸಿದ್ಧಾಂತ ಹಾಗೂ ಪ್ರಮಾಣಬಾಧ ದೋಷಗಳು ಬರುತ್ತಿತ್ತು.

ಕಿಂತು ನಾವು ಮಾಡಿರುವ ಈ ಅನುಮಾನ ದೂಷಣಾನುಮಾನವಾಗಿದೆ. ಅಂದರೆ- 'ವಿಮತಂ ಅನಾರಂಭಣೀಯಂ' ಎಂಬ ಪ್ರತಿಜ್ಞಾವಾಕ್ಯದಲ್ಲಿ 'ಸ್ಯಾತ್' ಎಂದು ಶೇಷ ಮಾಡಿಕೊಳ್ಳಬೇಕು. ಹಾಗಾದರೆ 'ವಿಮತಂ ಅನಾರಂಭಣೀಯಂ' (ವೇದಾದಿಶಾಸ್ತ್ರಗಳು ಅನಾರಂಭಣೀಯವೇ ಆಗಿವೆ) ಎಂಬುದಾಗಿ ಸಾಧನೆ ಮಾಡುತ್ತಿಲ್ಲ. ಪರಂತು

''ಯದಿ ವೇದಾದಿಕಂ ಜೀವಬ್ರಹ್ಮಣೋಃ ಐಕ್ಯಪ್ರತಿಪಾದಕಂ ಸ್ಯಾತ್ ತದಾ ಅನಾರಂಭಣೀಯಂ ಪ್ರಸಜ್ಯೇತ'' ''ಒಂದುವೇಳೆ ವೇದಾದಿಗಳು ಜೀವ-ಬ್ರಹ್ಮರಿಗೆ ಐಕ್ಯಪ್ರತಿಪಾದಕವಾಗುವುದೇ ಆದರೆ ಆಗ ಅನಾರಂಭಣೀಯವಾಗಬೇಕಾಗುತ್ತದೆ''

ಎಂಬುದಾಗಿ ಆಪಾದನೆ ಮಾಡಿದಂತಾಗುತ್ತದೆ. (ಇದು ಆಪಾದನೆಯೇ ಹೊರತು ಸಾಧನೆ ಅಲ್ಲ.) ಹೀಗೆ ನಾವು ಮಾಡಿರುವ ಈ ಅನುಮಾನವು ದೋಷಣಾನುಮಾನ-ವಾದ್ದರಿಂದ, (ಅಪಸಿದ್ಧಾಂತ-ಬಾಧದೋಷಗಳು ಸಾಧನಾನುಮಾನಕ್ಕೆ ದೋಷಗಳಾಗುತ್ತವೆಯೇ ಹೊರತು ದೂಷಣಾನುಮಾನಕ್ಕೆ ದೋಷವಾಗುವುದಿಲ್ಲ ಎಂಬುದಾಗಿ ಪ್ರಮಾಣಪದ್ಧತಿ ಮೊದಲಾದ ಗ್ರಂಥಗಳಲ್ಲಿ ಸಮರ್ಥಿಸಿರುವುದರಿಂದ) ಇಲ್ಲಿ ಅಪಸಿದ್ಧಾಂತದೋಷವಾಗಲೀ ಅಥವಾ ಪ್ರಮಾಣಬಾಧವಾಗಲೀ ಪ್ರಸಕ್ತವಾಗುವುದಿಲ್ಲ ಎನ್ನುವುದು ಸಮಾಧಾನದ ಆಂತರ್ಯ.

**ಅವತಾರಿಕೆ :-** ಈ ರೀತಿಯಾಗಿ ''ಯದಿ ವೇದಾದಿಕಂ ಜೀವಬ್ರಹ್ಮಣೋಃ ಐಕ್ಯಪ್ರತಿಪಾದಕಂ ಸ್ಯಾತ್ ತರ್ಹಿ ಅನಾರಂಭಣೀಯಂ ಪ್ರಸಜ್ಯೇತ'' ಎಂಬುದಾಗಿ ಐಕ್ಯಪ್ರತಿಪಾದಕತ್ವ ಎಂಬ ಆಪಾದಕವನ್ನು ಬಹಿರೇವ (ಅನುಮಾನದ ಹೊರಗೆಯೇ ಅಧ್ಯಾಹಾರ ಮಾಡಿ) ಹೇಳುವುದಾದರೆ, ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತುವಾಕ್ಯಕ್ಕೆ ವೈಯರ್ಥ್ಯದೋಷ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಉತ್ತರ ನೀಡುತ್ತಾರೆ -

**ಟೀಕಾ :- ಆಪಾದಕಮೇವ ಅನ್ಯಥಾಪ್ರತಿಪಾದಕತ್ವಾದಿತ್ಯನೇನ ಹೇತುವಾಕ್ಯೇನ ವಿವ್ರಿಯತ ಇತ್ಯದೋಷಃ । ತಚ್ಚೋತ್ತರತ್ರ ಪ್ರದರ್ಶಯಿಷ್ಯಾಮಃ ।**

**ಅನುವಾದ :-** ಐಕ್ಯಪ್ರತಿಪಾದಕತ್ವ ಎಂಬ ಆಪಾದಕವೇ ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತುವಾಕ್ಯದಿಂದ ವಿವರಿಸಲ್ಪಡುತ್ತದೆ. ಆದ್ದರಿಂದ ವೈಯರ್ಥ್ಯದೋಷ ಬರುವುದಿಲ್ಲ. ಆ ವಿವರಣಪ್ರಕಾರವನ್ನು ಮುಂದೆ 'ಯದಿ ಅದ್ವೈತಪರಂ ಶಾಸ್ತ್ರಂ ಸ್ಯಾತ್' ಇತ್ಯಾದಿಗ್ರಂಥಗಳಿಂದ ತೋರಿಸುತ್ತೇವೆ.

**ವಿವರಣೆ :-** ''ಯದಿ ವೇದಾದಿಕಂ ಜೀವಬ್ರಹ್ಮಣೋಃ ಐಕ್ಯಪ್ರತಿಪಾದಕಂ ಸ್ಯಾತ್ ತರ್ಹಿ ಅನಾರಂಭಣೀಯಂ ಪ್ರಸಜ್ಯೇತ'' ಎಂಬುದಾಗಿ ಐಕ್ಯಪ್ರತಿಪಾದಕತ್ವವನ್ನು ಆಪಾದಕವನ್ನಾಗಿ ಮಾಡುವುದಾದರೆ, ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತುವಾಕ್ಯ ವ್ಯರ್ಥವಾಗುತ್ತದೆಯಲ್ಲವೇ ? ಎಂಬುದಾಗಿ ವೈಯರ್ಥ್ಯದೋಷಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ಐಕ್ಯಪ್ರತಿಪಾದಕತ್ವ ಎಂಬ ಆಪಾದಕವೇ ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತುವಾಕ್ಯದಿಂದ ವಿವರಿಸಲ್ಪಡುತ್ತದೆ. ಆದ್ದರಿಂದ ವೈಯರ್ಥ್ಯದೋಷ ಬರುವುದಿಲ್ಲ.

ಅದು ಹೇಗೆ ? ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತುವಾಕ್ಯದಿಂದ ಐಕ್ಯಪ್ರತಿಪಾದಕತ್ವ ಎಂಬ ವಿವರಣೆ ಹೇಗೆ ಸಿಗುತ್ತದೆ ? ಎಂದರೆ, ಆ ವಿವರಣಪ್ರಕಾರವನ್ನು ಮುಂದೆ 'ಯದಿ ಅದ್ವೈತಪರಂ ಶಾಸ್ತ್ರಂ ಸ್ಯಾತ್' ಇತ್ಯಾದಿ ಗ್ರಂಥಗಳಿಂದ ತೋರಿಸಿಕೊಡುತ್ತೇವೆ ಎಂದು ಭಾವ.

**ಅವತಾರಿಕೆ :-** ಈವರೆಗೆ 'ವಿಮತಂ ಅನಾರಂಭಣೀಯಂ ಅನ್ಯಥಾ-ಪ್ರತಿಪಾದಕತ್ವಾತ್' ಎಂಬ ಅನುಮಾನವನ್ನು ದೂಷಣಾನುಮಾನವನ್ನಾಗಿ ವ್ಯಾಖ್ಯಾನವಮಾಡಿ, ಪ್ರಕೃತ ಸಾಧನಾನುಮಾನವನ್ನಾಗಿಯೂ ವ್ಯಾಖ್ಯಾನ ಮಾಡುತ್ತಾರೆ-

**ಟೀಕಾ :- ಅಥವಾ ವೇದತನ್ಮೀಮಾಂಸಾದಿಕಮೈಕ್ಯಪರತಯಾ ವ್ಯಾಕುರ್ವನ್ಮಾಯಾವಾದಿಪ್ರಣೀತಂ ಶಾಸ್ತ್ರಮೇವ ಪಕ್ಷೀಕೃತ್ಯ ತಸ್ಯಾನಾರಂಭಣೀಯತ್ವಂ ವೇದಾದೇಸ್ತತ್ಪರತ್ವನಿರಾಸಾಯ ಸಾಧ್ಯತೇ ।**

**ಅನುವಾದ :-** ಅಥವಾ ವೇದ-ತನ್ಮೀಮಾಂಸಾದಿಶಾಸ್ತ್ರಗಳನ್ನು ಐಕ್ಯಪರವಾಗಿ ವ್ಯಾಖ್ಯಾನ ಮಾಡುವ ಮಾಯಾವಾದಿಗಳಿಂದ ಪ್ರಣೀತವಾದ ಶಾಸ್ತ್ರವನ್ನೇ ಪಕ್ಷವನ್ನಾಗಿ ಮಾಡಿಕೊಂಡು, ವೇದಾದಿಗಳಿಗೆ ಐಕ್ಯಪರತ್ವವನ್ನು ನಿರಾಕರಿಸುವುದಕ್ಕಾಗಿ ಆ ಮಾಯಾವಾದಿಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಸಾಧಿಸಲಾಗುತ್ತದೆ.

**ವಿವರಣೆ :-** 'ವಿಮತಂ ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್' ಎಂಬ ಅನುಮಾನವು ದೂಷಣಾನುಮಾನವಾಗಿದೆ ಎಂಬುದಾಗಿ ಈವರೆಗೆ ವಿವಕ್ಷಿಸಲಾಗಿತ್ತು. ಪ್ರಕೃತ ಈ ಅನುಮಾನವು ಧೂಮಾನುಮಾನದಂತೆ ಸಾಧನಾನುಮಾನವೇ ಆಗಿದೆ ಎಂದು ವಿವಕ್ಷಿಸುತ್ತೇವೆ.

ಹಾಗಾದರೆ ವೇದಾದಿಗಳಿಗೆ ಅನಾರಂಭಣೀಯತ್ವವನ್ನು ಸಾಧಿಸುತ್ತೀರಾ ? ಸಾಧಿಸಿದರೆ ಅಪಸಿದ್ಧಾಂತ-ಬಾಧದೋಷಗಳು ಬರುವುದಲ್ಲ ? ಎಂದರೆ, ನಮ್ಮ ವಿವಕ್ಷೆ ಹಾಗಲ್ಲ. ಕಿಂತು ವೇದಾದಿಶಾಸ್ತ್ರಗಳನ್ನು ಐಕ್ಯಪರವಾಗಿ ವ್ಯಾಖ್ಯಾನ ಮಾಡುವ ಮಾಯಾವಾದಿಶಾಸ್ತ್ರವನ್ನು ಪಕ್ಷವನ್ನಾಗಿ ಮಾಡಿಕೊಂಡು ಅದಕ್ಕೆ ಅನಾರಂಭಣೀಯತ್ವವನ್ನು ಸಾಧನೆ ಮಾಡುತ್ತೇವೆ -

**ವಿಮತಂ(ಮಾಯಾವಾದಿಶಾಸ್ತ್ರಂ) ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್ ।**

ಮಾಯಾವಾದಿಶಾಸ್ತ್ರವು ಅನಾರಂಭಣೀಯವಾಗಿದೆ, ಅನ್ಯಥಾಪ್ರತಿಪಾದಕವಾದ್ದರಿಂದ ಎಂದು.

ಹೌದು, ಐಕ್ಯಪರವಾದ ಶ್ರುತಿ-ತನ್ಮೀಮಾಂಸಾಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಸಾಧಿಸುವುದೇ ಸಂಗತವಾದ್ದರಿಂದ, ಪ್ರಕೃತ ಮಾಯಾವಾದಿಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಸಾಧನೆ ಮಾಡಿದರೆ ''ಕರ್ಣೇ ಸ್ಪೃಷ್ಟೇ ಕಟಿಂ ಚಾಲಯತಿ'' (ಕಿವಿಯನ್ನು ಮುಟ್ಟಿದರೆ ಕಟಿಯನ್ನು ಅಲುಗಾಡಿಸುತ್ತಾನೆ) ಎಂಬ ನ್ಯಾಯವನ್ನು ಅನುಸರಿಸಿದಂತಾಗುವುದಿಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದರ ಪರಿಹಾರಕ್ಕಾಗಿ- 'ವೇದಾದೇಃ ತತ್ಪರತ್ವನಿರಾಸಾಯ' ಎಂಬ ಟೀಕಾವಾಕ್ಯ ಹೊರಟಿತು.

ಅದಕ್ಕಾಗಿಯೇ 'ಮಾಯಾವಾದಿಪ್ರಣೀತಂ ಶಾಸ್ತ್ರಮೇವ ಪಕ್ಷೀಕೃತ್ಯ' ಎಂದಷ್ಟೇ ಹೇಳಲಿಲ್ಲ. ಕಿಂತು 'ಐಕ್ಯಪರತಯಾ ವ್ಯಾಕುರ್ವನ್ಮಾಯಾವಾದಿಪ್ರಣೀತಂ' ಎಂದು ವಿಶೇಷಣ ನೀಡಿದ್ದಾರೆ.

ಹಾಗಾದರೆ, ವೇದತನ್ಮೀಮಾಂಸಾಶಾಸ್ತ್ರವನ್ನು ಐಕ್ಯಪರವಾಗಿ ವ್ಯಾಖ್ಯಾನ ಮಾಡುವಂತಹ ಮಾಯಾವಾದಿಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಸಾಧಿಸಿದರೆ, ಐಕ್ಯಪರತ್ವವನ್ನು ಉಪಪಾದನೆ ಮಾಡುವ ಬೇರೆ ಉಪಾಯ ಇಲ್ಲವಾದ್ದರಿಂದ ವೇದಾದಿಗಳಿಗೆ ಜೀವಬ್ರಹ್ಮಭೇದಪರತ್ವವೇ ಸಿದ್ಧಿಸುತ್ತದೆ.

ಈ ದೃಷ್ಟಿಯಲ್ಲಿ ವೇದತನ್ಮೀಮಾಂಸಾಶಾಸ್ತ್ರವನ್ನು ಐಕ್ಯಪರವಾಗಿ ವ್ಯಾಖ್ಯಾನ ಮಾಡುವ ಮಾಯಾವಾದಿಶಾಸ್ತ್ರವನ್ನು ಪಕ್ಷವನ್ನಾಗಿ ಮಾಡಿಕೊಂಡು, ಅದಕ್ಕೆ ಅನಾರಂಭಣೀಯತ್ವವನ್ನು ಸಾಧನೆ ಮಾಡುತ್ತಿರುವುದು ಯುಕ್ತವೇ ಆಗಿದೆ ಎಂದು ಭಾವ.

**ಅವತಾರಿಕೆ :-** ಮಾಯಾವಾದಿಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಹೇಗೆ (ಯಾವ ಹೇತುವಿನಿಂದ) ಸಾಧಿಸುತ್ತೀರಿ ? ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತುವಿನಿಂದಲೇ ಸಾಧಿಸುತ್ತೇವೆ ಎಂದರೆ, ಮೊದಲು ಆ ಅನ್ಯಥಾಪ್ರತಿಪಾದಕತ್ವಹೇತುವೇ [6] ಅಸಿದ್ಧವಾಗಿದೆ (ಸಿದ್ಧವಾಗಿಲ್ಲ).

ಮಾಯಾವಾದಿಶಾಸ್ತ್ರವು ಐಕ್ಯಪರವಾಗಿರುವುದರಿಂದಲೇ ಅದಕ್ಕೆ ಅನ್ಯಥಾಪ್ರತಿಪಾದಕತ್ವವು ಸಿದ್ಧಿಸುತ್ತದೆ ಎಂದು ಹೇಳುವುದು ಸರಿಯಲ್ಲ. ಕಾರಣ - ಭೇದಪರತ್ವವನ್ನು ಹೇಳಿದಾಗ ಹೇಗೆ ಅನ್ಯಥಾಪ್ರತಿಪಾದಕತ್ವಾಭಾವವು ಉಪಪನ್ನವಾಗುವುದೋ ಹಾಗೆ ಐಕ್ಯಪರತ್ವವನ್ನು ಹೇಳಿದಾಗಲೂ ಅನ್ಯಥಾಪ್ರತಿಪಾದಕತ್ವಾಭಾವವು ಉಪಪನ್ನವಾಗುವುದರಿಂದ, ಅನ್ಯಥಾಪ್ರತಿಪಾದಕತ್ವವನ್ನು ಕುರಿತು ಐಕ್ಯಪರತ್ವವು ಅಪ್ರಯೋಜಕವಾಗಿದೆ. ಆದ್ದರಿಂದ ಮಾಯಾವಾದಿಶಾಸ್ತ್ರವನ್ನು ಅನ್ಯಥಾಪ್ರತಿಪಾದಕ ಎಂದು ಹೇಗೆ ಹೇಳುತ್ತೀರಿ ? ಎಂದು ಶಂಕಿಸಿ, ಅನ್ಯಥಾಪ್ರತಿಪಾದಕತ್ವವನ್ನು ತೋರಿಸಿಕೊಡುತ್ತಾರೆ -

**ಟೀಕಾ :- ಕಥಮನ್ಯಥಾಪ್ರತಿಪಾದಕತ್ವಂ ವಿಮತಸ್ಯ ಶಾಸ್ತ್ರಸ್ಯೇತ್ಯತ ಆಹ -**

[7] ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇ ।

**ಟೀಕಾ :- ಅನ್ಯಥಾಪ್ರತಿಪಾದಕತ್ವಂ ಹ್ಯಯಥಾರ್ಥಪ್ರತಿಪಾದಕತ್ವಮ್ । ಬ್ರಹ್ಮಾತ್ಮನೋರೇಕತ್ವಂ ಚ ಶಾಸ್ತ್ರವಿಷಯತಯಾ ಪರಸ್ಯಾಭಿಮತಮ್ । ನ ತತ್ ಪರಮಾರ್ಥಭೂತಮ್ । ಅತೋಽನ್ಯಥಾಪ್ರತಿಪಾದಕತ್ವಂ ಸಿದ್ಧಮ್ ।**

---

6) ಮಾಯಾವಾದಿಶಾಸ್ತ್ರದಲ್ಲಿ ಅನ್ಯಥಾಪ್ರತಿಪಾದಕತ್ವ ಇದೆ ಎಂದು ಸಿದ್ಧವಾಗಿದ್ದರೆ ಆಗ ಸಿದ್ಧವಾದ ಆ ಹೇತುವಿನಿಂದ ಅನಾರಂಭಣೀಯತ್ವವನ್ನು ಸಾಧಿಸುವುದು ಯುಕ್ತವಾಗುತ್ತಿತ್ತು. ಆದರೆ ಮಾಯಾವಾದಿಶಾಸ್ತ್ರದಲ್ಲಿ ಅನ್ಯಥಾಪ್ರತಿಪಾದಕತ್ವ ಇದೆ ಎನ್ನುವುದೇ ಸಿದ್ಧವಾಗಿಲ್ಲ ಎಂದು ಭಾವ.

7) ಮೂಲೇ ನ ಹೀತಿ । ತತ್ಪಕ್ಷೇ ಸೂತ್ರಕಾರಪಕ್ಷೇ । ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ನ ಹಿ । ಅಪ್ರಾಮಾಣಿಕಸ್ಯ ಪ್ರಮಾಣವಿರುದ್ಧಸ್ಯ ಸೂತ್ರಕಾರಾನಭಿಮತತ್ವಾತ್ । ತತಶ್ಚಾಸತ ಐಕ್ಯಸ್ಯ ಸತ್ವೇನ ಪ್ರಮಾಣಭೂತವೇದಾದಿವಿಷಯತ್ವಂ ಪ್ರತಿಪಾದಯತೋ ಮಾಯಾವಾದಿಶಾಸ್ತ್ರಸ್ಯಾನ್ಯಥಾಪ್ರತಿಪಾದಕತ್ವಮಿತಿ ಮೂಲಾರ್ಥಃ ।

(ಶ್ರೀಸತ್ಯನಾಥತೀರ್ಥವಿರಚಿತಃ ಮಾಯಾವಾದಪರಶುಃ)

**ಅನುವಾದ :-** ಮಾಯಾವಾದಶಾಸ್ತ್ರಕ್ಕೆ ಅನ್ಯಥಾಪ್ರತಿಪಾದಕತ್ವ ಹೇಗೆ ? ಎಂದು ಶಂಕೆ ಬಂದರೆ, ಅದನ್ನು ತಿಳಿಸುತ್ತಾರೆ -

**ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇ ।** (ಮೂಲ)

ಮಾಯಾವಾದಿಗಳ ಪಕ್ಷದಲ್ಲಿ (ಮತದಲ್ಲಿ) ಬ್ರಹ್ಮಾತ್ಮೈಕ್ಯಕ್ಕೆ ಯಾಥಾರ್ಥ್ಯ ಇಲ್ಲ ಎಂದು ಮೂಲಾರ್ಥ.

ಅನ್ಯಥಾಪ್ರತಿಪಾದಕತ್ವ ಎಂದರೆ ಅಯಥಾರ್ಥಪ್ರತಿಪಾದಕತ್ವ (ಅಪಾರಮಾರ್ಥಿಕ-ವಾದದ್ದನ್ನು ಪ್ರತಿಪಾದಿಸುವುದು) ಎಂದರ್ಥ. ''ಜೀವ-ಬ್ರಹ್ಮರ ಐಕ್ಯವು ಶಾಸ್ತ್ರಕ್ಕೆ ವಿಷಯವಾಗಿದೆ'' ಎಂದು ಮಾಯಾವಾದಿಗಳಿಗೆ ಅಭಿಮತವಾಗಿದೆ. ಅಂತಹ ವಿಷಯತ್ವೇನ ಅಭಿಮತವಾದ ಐಕ್ಯವು ಪರಮಾರ್ಥಭೂತವಾಗಿಲ್ಲ (ಯಾಥಾರ್ಥ-ವಾಗಿಲ್ಲ). ಕಿಂತು ಅಯಥಾರ್ಥವೇ ಆಗಿದೆ. ಅಂತಹ ಅಯಥಾರ್ಥವಾದ ಐಕ್ಯವನ್ನು ಪ್ರತಿಪಾದನೆ ಮಾಡುವ ಮಾಯಾವಾದಶಾಸ್ತ್ರಕ್ಕೆ ಅಯಥಾರ್ಥಪ್ರತಿಪಾದಕತ್ವವು= ಅನ್ಯಥಾಪ್ರತಿಪಾದಕತ್ವವು ಸಿದ್ಧವಾಗುತ್ತದೆ.

**ಅವತಾರಿಕೆ :-** ಹಿಂದೆ ''ತಚ್ಚೋತ್ತರತ್ರ ಪ್ರದರ್ಶಯಿಷ್ಯಾಮಃ'' (ಐಕ್ಯಪ್ರತಿಪಾದಕತ್ವ ಎಂಬ ಆಪಾದಕವೇ ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತುವಾಕ್ಯದಿಂದ ವಿವರಿಸಲ್ಪಡುತ್ತದೆ. ಆದ್ದರಿಂದ ಹೇತುವಾಕ್ಯಕ್ಕೆ ವೈಯರ್ಥ್ಯದೋಷ ಇಲ್ಲ. ಆ ವಿವರಣಪ್ರಕಾರವನ್ನು ಮುಂದೆ ತೋರಿಸುತ್ತೇವೆ) ಎಂಬುದಾಗಿ ಏನು ಹೇಳಿದರೋ ಆ ವಿವರಣಪ್ರಕಾರವನ್ನು ತೋರಿಸುವುದಕ್ಕಾಗಿ ಶಂಕಿಸುತ್ತಾರೆ -

**ಟೀಕಾ :- ನನು 'ಯದ್ಯದ್ವೈತಪರಂ ಶಾಸ್ತ್ರಂ ಸ್ಯಾತ್ ತದಾ ಅನಾರಂಭಣೀಯಂ ಪ್ರಸಜ್ಯೇತ' ಇತಿ ಪ್ರಸಂಗೋಕ್ತೌ ಆಪಾದಕಸ್ಯೋಕ್ತತ್ವಾತ್ ಪುನರ್ಹೇತ್ವಭಿಧಾನಂ ವ್ಯರ್ಥಂ ಸ್ಯಾತ್ । ನ ಚೈತದೇವ ಆಪಾದಕಾಭಿಧಾನಮಿತಿ ವಾಚ್ಯಮ್ । ತಥಾ ಸತ್ಯನ್ಯಥಾಪ್ರತಿಪಾದಕತ್ವಾದಿತ್ಯಸ್ಯ ಬ್ರಹ್ಮಾತ್ಮೈಕ್ಯ-ಪ್ರತಿಪಾದಕತ್ವಾದಿತ್ಯರ್ಥಃ ಸ್ಯಾತ್ । ತಥಾ ಚ ದೃಷ್ಟಾಂತಾನುಪಪತ್ತಿಃ । ನ ಹಿ ಬ್ರಹ್ಮಾತ್ಮೈಕ್ಯಸ್ಯೇತ್ಯುಪಪಾದನಾನುಪಯೋಗೋಽಸಂಗತತ್ವಂ ಚೇತಿ ।**

**ಮೈವಮ್ । ಅಭಿಪ್ರಾಯಸದ್ಭಾವಾತ್ । ತಥಾ ಹಿ 'ಯದ್ಯದ್ವೈತಮೇವ ಶಾಸ್ತ್ರಾರ್ಥಃ ಸ್ಯಾತ್ ತದಾ ಶಾಸ್ತ್ರಮನಾರಂಭಣೀಯಂ ಸ್ಯಾತ್' ಇತ್ಯುಕ್ತೇ ನಿಮಿತ್ತನೈಮಿತ್ತಿಕಭಾವಸ್ಯ ಅಸ್ಫುಟತ್ವಾತ್, ಕಥಮಿತ್ಯಾಕಾಂಕ್ಷಾಯಾಂ**

**ಅನ್ಯಥಾಪ್ರತಿಪಾದಕತ್ವಾತ್ ಇತ್ಯುಕ್ತಮ್ । 'ಯದಿ ಶಾಸ್ತ್ರಾರ್ಥೋಽದ್ವೈತಂ ಸ್ಯಾತ್ ತದಾ ಶಾಸ್ತ್ರಮನ್ಯಥಾಪ್ರತಿಪಾದಕಂ ಸ್ಯಾತ್ । ತತಶ್ಚ ಅನಾರಂಭಣೀಯಂ ಪ್ರಸಜ್ಯೇತ' ಇತಿ ।**

**ಅನುವಾದ ಹಾಗೂ ವಿವರಣೆ :-** ಹೌದು, ''ಒಂದುವೇಳೆ ಶಾಸ್ತ್ರವು ಐಕ್ಯಪರವಾಗುವುದಾದರೆ ಆಗ ಅನಾರಂಭಣೀಯ ಆಗಬೇಕಾಗುತ್ತದೆ'' ಎಂಬುದಾಗಿ ತರ್ಕವನ್ನು ಹೇಳಿದಾಗ ಐಕ್ಯಪ್ರತಿಪಾದಕತ್ವ ಎಂಬ ಆಪಾದಕವನ್ನು ಹೇಳಿದ್ದರಿಂದ ಅನ್ಯಥಾಪ್ರತಿಪಾದಕತ್ವಾತ್ ಎಂದು ಪುನಃ ಹೇತುವನ್ನು ಹೇಳುವುದು ವ್ಯರ್ಥವಾಗುತ್ತದೆ. ಈ ಅನ್ಯಥಾಪ್ರತಿಪಾದಕತ್ವಾತ್ ಎನ್ನುವುದೇ ಆಪಾದಕಾಭಿಧಾನ ಎಂದು ಹೇಳುವುದು ಸರಿಯಲ್ಲ. ಕಾರಣ - ಹಾಗೆ ಹೇಳಿದರೆ ಅನ್ಯಥಾಪ್ರತಿಪಾದಕತ್ವಾತ್ ಎನ್ನುವುದಕ್ಕೆ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಾತ್ ಎಂದು ಅರ್ಥ ಹೇಳಿದಂತಾಗುತ್ತದೆ. ಅಂದರೆ -

''ವಿಮತಂ ಅನಾರಂಭಣೀಯಂ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಾತ್ ಯಥಾ ಬೌದ್ಧಾದಿಶಾಸ್ತ್ರಮ್''

ಎಂದು ಅನುಮಾನ ಮಾಡಿದಂತಾಗುತ್ತದೆ. ಆದರೆ ಹೀಗೆ ಹೇಳಿದಾಗ ದೃಷ್ಟಾಂತವಾದ ಬೌದ್ಧಾದಿಶಾಸ್ತ್ರದಲ್ಲಿ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವ ಎಂಬ ಸಾಧನ ಬರುವುದಿಲ್ಲವಾದ್ದರಿಂದ ದೃಷ್ಟಾಂತಾನುಪಪತ್ತಿ (ಸಾಧನವೈಕಲ್ಯದೋಷ) ಬರುತ್ತದೆ.

ಮತ್ತು -

''[8]ಕಥಂ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಂ ವಿಮತಸ್ಯ ಶಾಸ್ತ್ರಸ್ಯ ?'' (ಮಾಯಾವಾದಿ ಶಾಸ್ತ್ರಕ್ಕೆ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವ ಹೇಗೆ ?)

---

8). ಇಲ್ಲಿ ಅಭಿಪ್ರಾಯ ಇಂತಿದೆ :- ಹಿಂದಿನ ಟೀಕೆಯಲ್ಲಿ ''ಕಥಮನ್ಯಥಾಪ್ರತಿಪಾದಕತ್ವಂ ವಿಮತಸ್ಯ ಶಾಸ್ತ್ರಸ್ಯೇತ್ಯತ ಆಹ'' ಎಂಬುದಾಗಿ ಪ್ರಶ್ನೆ ಮಾಡಿಕೊಂಡಿದ್ದಾರೆಯೇ ಹೊರತು ''ಕಥಂ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಂ ವಿಮತಸ್ಯ ಶಾಸ್ತ್ರಸ್ಯ'' ಎಂದು ಪ್ರಶ್ನೆ ಮಾಡಿಕೊಂಡಿಲ್ಲವಲ್ಲ ? ಎಂದು ಶಂಕಿಸುವುದು ಬೇಡ. ಕಾರಣ - ಪ್ರಕೃತ 'ಅನ್ಯಥಾಪ್ರತಿಪಾದಕತ್ವಾತ್' ಎನ್ನುವುದಕ್ಕೆ 'ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಾತ್' ಎಂದೇ ಅರ್ಥ ಹೇಳಿರುವುದರಿಂದ

''ಕಥಮನ್ಯಥಾಪ್ರತಿಪಾದಕತ್ವಂ ವಿಮತಸ್ಯ ಶಾಸ್ತ್ರಸ್ಯ'' ಎಂದು ಪ್ರಶ್ನೆ ಮಾಡಿಕೊಂಡರೆ ''ಕಥಂ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಂ ವಿಮತಸ್ಯ ಶಾಸ್ತ್ರಸ್ಯ'' ಎಂದೇ ಪ್ರಶ್ನೆ ಮಾಡಿಕೊಂಡಂತಾಗುತ್ತದೆ ಎಂದು ತಿಳಿಯಬೇಕು.

ಎಂಬುದಾಗಿ ಪ್ರಶ್ನೆ ಬಂದಾಗ,

''ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇ ।'' (ಮಾಯಾವಾದಿಪಕ್ಷದಲ್ಲಿ ಬ್ರಹ್ಮಾತ್ಮೈಕ್ಯಕ್ಕೆ ಯಾಥಾರ್ಥ್ಯವಿಲ್ಲ)

ಎಂದು ಉಪಪಾದನ ಮಾಡುವುದು (ಉತ್ತರ ಹೇಳುವುದು) ಅನುಪಯುಕ್ತವೂ (ಅಸಂಗತವೂ) ಆಗುತ್ತದೆ ಎಂಬುದಾಗಿ ಶಂಕೆ ಬರುತ್ತದೆ.

ಆದರೆ ಅದು ಸರಿಯಲ್ಲ. ಕಾರಣ ಇಲ್ಲಿ ನಮ್ಮ ವಿಶೇಷ ಅಭಿಪ್ರಾಯವಿದೆ. ಅದೇನೆಂದರೆ - ''ಒಂದುವೇಳೆ ಐಕ್ಯವೇ ಶಾಸ್ತ್ರಾರ್ಥವಾಗುವುದಾದರೆ ಆಗ ಶಾಸ್ತ್ರವು ಅನಾರಂಭಣೀಯವಾಗಬೇಕಾಗುತ್ತದೆ'' ಎಂಬುದಾಗಿ (ತರ್ಕ ಹೇಳಿದಾಗ) ಆಪಾದನ ಮಾಡಿದಾಗ ಇಲ್ಲಿ ನಿಮಿತ್ತ-ನೈಮಿತ್ತಿಕಭಾವವು ಸ್ಫುಟವಾಗಿ ತೋರುವುದಿಲ್ಲ. ಅಂದರೆ ಐಕ್ಯವು ಶಾಸ್ತ್ರಾರ್ಥವಾಗುವುದು ನಿಮಿತ್ತ (ಪ್ರಯೋಜಕ), ಅನಾರಂಭಣೀಯತ್ವವು ನೈಮಿತ್ತಿಕ (ಪ್ರಯೋಜ್ಯ) ಎಂದು ಹೇಳಿದಂತಾಗುತ್ತದೆ. ಆದರೆ ಐಕ್ಯವು ಶಾಸ್ತ್ರಾರ್ಥವಾದ ಮಾತ್ರಕ್ಕೆ ಶಾಸ್ತ್ರವು ಏಕೆ ಅನಾರಂಭಣೀಯವಾಗಬೇಕು ? (ಪ್ರತಿಪಾದ್ಯವಾದದ್ದು ಅಯಥಾರ್ಥವಾದರೆ ಅನಾರಂಭಣೀಯವಾಗುವುದು ಉಚಿತ. ಆದರೆ ಐಕ್ಯವು ಪ್ರತಿಪಾದ್ಯವಾದ ಮಾತ್ರಕ್ಕೆ ಅನಾರಂಭಣೀಯ ಏಕೆ ಆಗಬೇಕು ?) ಎಂದು ಪ್ರಶ್ನೆ ಬರುವುದರಿಂದ ಇಲ್ಲಿ ಆಪಾದಕ-ಆಪಾದ್ಯಗಳಲ್ಲಿ ಪ್ರಯೋಜ್ಯ-ಪ್ರಯೋಜಕಭಾವವು ಸ್ಫುಟವಾಗಿ ತೋರುವುದಿಲ್ಲ. ಹೀಗಾಗಿ ಅನಾರಂಭಣೀಯತ್ವವನ್ನು ಕುರಿತು ಐಕ್ಯಪ್ರತಿಪಾದಕತ್ವವು ಪ್ರಯೋಜಕವಲ್ಲ, ಅಪ್ರಯೋಜಕವಾಗಿದೆ. ಆದ್ದರಿಂದ ''ಐಕ್ಯಪ್ರತಿಪಾದಕವಾದರೆ ಅನಾರಂಭಣೀಯವಾಗಬೇಕಾಗುತ್ತದೆ'' ಎಂದು ಹೇಗೆ ಆಪಾದನೆ ಮಾಡುತ್ತೀರಿ ? ಎಂಬುದಾಗಿ ಪ್ರಶ್ನೆ ಬಂದರೆ, ಅದಕ್ಕೆ ಉತ್ತರ ನೀಡಲು ಮಧ್ಯದಲ್ಲಿ ಅನ್ಯಥಾಪ್ರತಿಪಾದಕತ್ವಾತ್ ಎಂದು ಹೇಳಲಾಗಿದೆ.

ಇದರಿಂದ ಉತ್ತರ ಏನು ಹೇಳಿದಂತಾಯಿತು ? ಎಂದರೆ,

''ಯದಿ ಅದ್ವೈತಂ ಶಾಸ್ತ್ರಾರ್ಥಃ ಸ್ಯಾತ್ ತದಾ ಶಾಸ್ತ್ರಮನ್ಯಥಾಪ್ರತಿಪಾದಕಂ ಸ್ಯಾತ್, ಯದಿ ಶಾಸ್ತ್ರಮನ್ಯಥಾಪ್ರತಿಪಾದಕಂ ಸ್ಯಾತ್ ತದಾ ಅನಾರಂಭಣೀಯಂ ಪ್ರಸಜ್ಯೇತ''

(ಒಂದುವೇಳೆ ಐಕ್ಯವೇ ಶಾಸ್ತ್ರಾರ್ಥವಾಗುವುದಾದರೆ ಆಗ ಶಾಸ್ತ್ರವು ಅನ್ಯಥಾಪ್ರತಿಪಾದಕವಾಗುತ್ತದೆ. ಒಂದುವೇಳೆ ಶಾಸ್ತ್ರವು ಅನ್ಯಥಾಪ್ರತಿಪಾದಕ-ವಾಗುವುದಾದರೆ ಆಗ ಅನಾರಂಭಣೀಯವಾಗಬೇಕಾಗುತ್ತದೆ)

ಎಂಬುದಾಗಿ ನಾವು ಆಪಾದನೆ ಮಾಡಿದಂತಾಗುತ್ತದೆ. ಅಂದರೆ ಅನಾರಂಭಣೀಯತ್ವವನ್ನು ಕುರಿತು ಐಕ್ಯಪ್ರತಿಪಾದಕತ್ವವನ್ನು ನೇರವಾಗಿ (ಸಾಕ್ಷಾತ್ತಾಗಿ) ಪ್ರಯೋಜಕವನ್ನಾಗಿ ಮಾಡುವುದಿಲ್ಲ. ಕಿಂತು ಅನಾರಂಭಣೀಯತ್ವವನ್ನು ಕುರಿತು ಅನ್ಯಥಾಪ್ರತಿಪಾದಕತ್ವ ಪ್ರಯೋಜಕ, ಆ ಅನ್ಯಥಾಪ್ರತಿಪಾದಕತ್ವವನ್ನು ಕುರಿತು ಐಕ್ಯಪ್ರತಿಪಾದಕತ್ವವು ಪ್ರಯೋಜಕ ಎಂದು ಹೇಳಿದಂತಾಗುತ್ತದೆ. ಇವುಗಳಲ್ಲಿ ನಿಮಿತ್ತ-ನೈಮಿತ್ತಿಕಭಾವವು ಸ್ಫುಟವಾಗಿ ತೋರುತ್ತದೆಯಾದ್ದರಿಂದ ಆಪಾದನವು ಸಮಂಜವಾಗುತ್ತದೆ. ಜೊತೆಗೆ ''ಯದಿ ಶಾಸ್ತ್ರಮನ್ಯಥಾಪ್ರತಿಪಾದಕಂ ಸ್ಯಾತ್ ತದಾ ಅನಾರಂಭಣೀಯಂ ಪ್ರಸಜ್ಯೇತ'' (ಒಂದುವೇಳೆ ಶಾಸ್ತ್ರವು ಅನ್ಯಥಾಪ್ರತಿಪಾದಕ-ವಾಗುವುದಾದರೆ ಆಗ ಅನಾರಂಭಣೀಯ ಆಗಬೇಕಾಗುತ್ತದೆ) ಎಂಬ ಎರಡನೇ ತರ್ಕದಲ್ಲಿ ಸಂಪ್ರತಿಪನ್ನಶಬ್ದೋಕ್ತವಾದ ಬೌದ್ಧಾದಿಶಾಸ್ತ್ರವನ್ನು ದೃಷ್ಟಾಂತವನ್ನಾಗಿ ಮಾಡುತ್ತೇವೆಯಾದ್ದರಿಂದ ಸಾಧನವೈಕಲ್ಯದೋಷವೂ (ದೃಷ್ಟಾಂತಾನುಪಪತ್ತಿ ದೋಷವೂ) ಬರುವುದಿಲ್ಲ ಎಂದು ಭಾವ.

**ಅವತಾರಿಕೆ :-** ಅನಾರಂಭಣೀಯತ್ವವನ್ನು ಕುರಿತು ಅನ್ಯಥಾಪ್ರತಿಪಾದಕತ್ವ ಪ್ರಯೋಜಕವಾಗಿದೆ ಎಂದು ಹೇಳುವುದು ಅಂದರೆ 'ಯದಿ ಶಾಸ್ತ್ರಮನ್ಯಥಾಪ್ರತಿಪಾದಕಂ ಸ್ಯಾತ್ ತದಾ ಅನಾರಂಭಣೀಯಂ ಪ್ರಸಜ್ಯೇತ' ಎಂಬುದಾಗಿ ಆಪಾದನ ಮಾಡುವುದು (ಎರಡನೇ ತರ್ಕವು) ಸರಿಯೇ. ಆದರೆ ಅನ್ಯಥಾಪ್ರತಿಪಾದಕತ್ವವನ್ನು ಕುರಿತು ಐಕ್ಯಪ್ರತಿಪಾದಕತ್ವವು ಪ್ರಯೋಜಕ ಎಂದು ಹೇಳುವುದು ಹೇಗೆ ಸರಿಯಾಗುತ್ತದೆ ? ಅಂದರೆ 'ಯದಿ ಅದ್ವೈತಂ ಶಾಸ್ತ್ರಾರ್ಥಃ ಸ್ಯಾತ್ ತರ್ಹಿ ಅನ್ಯಥಾಪ್ರತಿಪಾದಕಂ ಸ್ಯಾತ್' ಎಂದು ಹೇಗೆ ಆಪಾದನೆ ಮಾಡುತ್ತೀರಿ ? ಶಾಸ್ತ್ರವು ಐಕ್ಯವನ್ನು ಪ್ರತಿಪಾದನೆ ಮಾಡಿದರೆ ಅನ್ಯಥಾಪ್ರತಿಪಾದಕ ಏಕೆ ಆಗುತ್ತದೆ ? ಎಂಬುದಾಗಿ ಶಂಕೆ ಮಾಡಿಕೊಂಡು ಅದಕ್ಕೆ ಸಮಾಧಾನವನ್ನು ನಿರೂಪಿಸುತ್ತಾರೆ -

**ಟೀಕಾ :- ಅದ್ವೈತಸ್ಯೈವ ಶಾಸ್ತ್ರಾರ್ಥತ್ವೇ ಶಾಸ್ತ್ರಸ್ಯ ಅಯಥಾರ್ಥ-ಪ್ರತಿಪಾದಕತ್ವಂ ಕಥಂ ? ಇತ್ಯತೋ ನ ಹಿ ಬ್ರಹ್ಮಾತ್ಮೈಕ್ಯಸ್ಯೇತ್ಯಭಿಹಿತಮ್ । ತತ್ರೋಪಪತ್ತಿಃ 'ತತ್ಪಕ್ಷೇ' ಇತಿ । ಐಕ್ಯಮೇವ ಶಾಸ್ತ್ರಾರ್ಥಶ್ಚೇದ್ ಬ್ರಹ್ಮಾತಿರಿಕ್ತಂ**

**ಸರ್ವಮಪರಮಾರ್ಥಭೂತಂ ಸ್ಯಾತ್ । ಐಕ್ಯಂ ಚ ಬ್ರಹ್ಮವ್ಯತಿರಿಕ್ತತ್ವಾತ್ ಅಪರಮಾರ್ಥಭೂತಮ್ । ತತ್ಪ್ರತಿಪಾದಕಂ ಚ ಶಾಸ್ತ್ರಂ ಕಥಂ ಅನ್ಯಥಾಪ್ರತಿಪಾದಕಂ ನ ಭವೇದಿತಿ ।**

**ಅನುವಾದ :-** ಅದ್ವೈತವೇ ಶಾಸ್ತ್ರಾರ್ಥವಾಗುವುದಾದರೆ ಶಾಸ್ತ್ರಕ್ಕೆ ಅಯಥಾರ್ಥಪ್ರತಿಪಾದಕತ್ವ ಹೇಗೆ ? ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನರೂಪವಾಗಿ ''ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇ'' (ಎಂಬ ವಾಕ್ಯವು ಪ್ರವೃತ್ತವಾಗಿದೆ) ಎಂದು ಹೇಳಿದ್ದಾರೆ. ತತ್ಪಕ್ಷೇ ಎನ್ನುವುದು ಅಲ್ಲಿ ಉಪಪತ್ತಿಯಾಗಿದೆ. ಐಕ್ಯವೇ ಶಾಸ್ತ್ರಾರ್ಥವಾಗುವುದಾದರೆ, ನಿಮ್ಮ ಪಕ್ಷ(ಸಿದ್ಧಾಂತ)ದಲ್ಲಿ ಬ್ರಹ್ಮಾತಿರಿಕ್ತವಾದ ಎಲ್ಲವೂ ಅಪರಮಾರ್ಥಭೂತ(ಅಯಥಾರ್ಥ)ವಾಗುತ್ತದೆ. ಐಕ್ಯವೂ ಬ್ರಹ್ಮಾತಿರಿಕ್ತವಾದ್ದರಿಂದ ಅದೂ ಅಪರಮಾರ್ಥಭೂತವೇ. ಅಂತಹ ಅಪರಮಾರ್ಥಭೂತವಾದ ಐಕ್ಯವನ್ನು ಪ್ರತಿಪಾದನೆ ಮಾಡುವ ಶಾಸ್ತ್ರವು ಅನ್ಯಥಾಪ್ರತಿಪಾದಕ ಏಕೆ ಆಗುವುದಿಲ್ಲ? ಇದು ಉಪಪತ್ತಿಯ ಭಾವ.

**ಅವತಾರಿಕೆ :-** ಐಕ್ಯವು ಬ್ರಹ್ಮಾತಿರಿಕ್ತವಾಗಿದೆ, ಜೊತೆಗೆ ಸತ್ಯವೂ ಆಗಿದೆ ಎಂದು ಅಂಗೀಕರಿಸುತ್ತೇವೆ. ಹಾಗಾದರೆ ಶಾಸ್ತ್ರವು ಯಥಾರ್ಥಪ್ರತಿಪಾದಕವಾಗುತ್ತದೆಯೇ ಹೊರತು ಅನ್ಯಥಾಪ್ರತಿಪಾದಕವಾಗುವುದಿಲ್ಲ ಎಂಬುದಾಗಿ ಶಂಕಿಸಿದರೆ, ಆ ಪಕ್ಷಕ್ಕೆ ಅದ್ವೈತಹಾನಿರೂಪದೋಷವನ್ನು ಹೇಳುತ್ತಾರೆ -

**ಟೀಕಾ :- ಅಥ ಬ್ರಹ್ಮಾತ್ಮೈಕ್ಯಂ ತತ್ಸ್ವರೂಪಾತಿರಿಕ್ತಮಪಿ ಪರಮಾರ್ಥ-ಸದಂಗೀಕ್ರಿಯತೇ ತದಾ ತೇನೈವ ದ್ವೈತಾಪತ್ತೇರದ್ವೈತಪರಂ ಶಾಸ್ತ್ರಮಿತ್ಯಸ್ಯ ಹಾನಿಃ ಸ್ಯಾದಿತ್ಯಾಹ -**

**- ಮಾಯಾವಾದಖಂಡನ -**

ಅದ್ವೈತಹಾನೇಃ ಸ್ವರೂಪಾತಿರೇಕೇ ।

**ಬ್ರಹ್ಮಾತ್ಮೈಕ್ಯಸ್ಯೇತಿ ವರ್ತತೇ । ಯಾಥಾರ್ಥ್ಯೇ ಸತೀತಿ ಶೇಷಃ ।**

**ಅನುವಾದ :-** ಬ್ರಹ್ಮಾತ್ಮೈಕ್ಯವು ಬ್ರಹ್ಮಸ್ವರೂಪಾತಿರಿಕ್ತವಾಗಿದ್ದರೂ ಸಹ ಪರಮಾರ್ಥಸತ್ ಎಂದು ಅಂಗೀಕರಿಸುತ್ತೇವೆ. ಆದ್ದರಿಂದ ಶಾಸ್ತ್ರಕ್ಕೆ ಅನ್ಯಥಾಪ್ರತಿಪಾದಕತ್ವ ಬರುವುದಿಲ್ಲ ಎನ್ನುವುದಾದರೆ, ಆಗ ಬ್ರಹ್ಮಸ್ವರೂಪಾತಿರಿಕ್ತವಾದ ಪರಮಾರ್ಥಸತ್ ಆದ

ಐಕ್ಯವಸ್ತು ಅಂಗೀಕರಿಸುವುದರಿಂದಲೇ ಎರಡನೇ ಸತ್ಯವಸ್ತುವನ್ನು ಅಂಗೀಕರಿಸಿದಂತಾಗುವುದರಿಂದ 'ಶಾಸ್ತ್ರಂ ಅದ್ವೈತಪರಂ' (ಶಾಸ್ತ್ರವು ಸತ್ಯಭೂತವಾದ ದ್ವಿತೀಯವಸ್ತು ಇಲ್ಲ ಎಂದು ಪ್ರತಿಪಾದಿಸುತ್ತಿದೆ) ಎಂಬ ನಿಮ್ಮ ಸಿದ್ಧಾಂತಕ್ಕೆ ಹಾನಿಯಾಗುತ್ತದೆ ಎಂದು ಹೇಳುತ್ತಾರೆ -

**ಅದ್ವೈತಹಾನೇಃ ಸ್ವರೂಪಾತಿರೇಕೇ ।** (ಮೂಲ)

ಬ್ರಹ್ಮಾತ್ಮೈಕ್ಯವು ಬ್ರಹ್ಮಸ್ವರೂಪದಿಂದ ಅತಿರಿಕ್ತವಾಗಿ ಯಥಾರ್ಥವಾಗಿದೆ ಎಂದು ಹೇಳಿದರೆ ಅದ್ವೈತಹಾನಿಯಾಗುತ್ತದೆ ಎಂದು ಮೂಲಾರ್ಥ.

**ಅವತಾರಿಕೆ :-** ಐಕ್ಯವು ಬ್ರಹ್ಮನಿಂದ ಅಭಿನ್ನ ಎಂದು ಹೇಳುವುದಾದರೆ ಸ್ವಮತರೀತ್ಯಾ ಸಿದ್ಧಸಾಧನತಾದೋಷವನ್ನು ಹೇಳುತ್ತಾರೆ -

**ಟೀಕಾ :- ಸ್ಯಾದೇತತ್, ಐಕ್ಯಂ ಪರಮಾರ್ಥಸದೇವ । ಕಿಂತು ಬ್ರಹ್ಮಸ್ವರೂಪಾನತಿರಿಕ್ತಮೇವ ।[9] ಯಥಾಹ - ''ತಚ್ಚಾದ್ವೈತಂ 'ಬ್ರಹ್ಮೈವೇದಂ ಸರ್ವಂ' ಇತಿ ಶ್ರುತ್ಯರ್ಥೇನ ಸಹೈಕ್ಯಮಾಪನ್ನಂ ಹಿ ಬ್ರಹ್ಮೈವ ಸ್ಯಾತ್'' ಇತಿ । ತಥಾ ಚ ಕಥಂ ತತ್ಪ್ರತಿಪಾದಕಂ ಶಾಸ್ತ್ರಮಯಥಾರ್ಥಪ್ರತಿಪಾದಕಂ ಸ್ಯಾದಿತ್ಯತ ಆಹ -**

**- ಮಾಯಾವಾದಖಂಡನ -**

ಅನತಿರೇಕೇ ಸ್ವಪ್ರಕಾಶತ್ವಾದಾತ್ಮನಃ ಸಿದ್ಧಸಾಧನತಾ ।

**ಶಾಸ್ತ್ರಸ್ಯೇತಿ ಶೇಷಃ । ಯದ್ಯದ್ವೈತಂ ಬ್ರಹ್ಮಸ್ವರೂಪಾನತಿರಿಕ್ತಂ ಸ್ಯಾತ್ ತದಾ ಶಾಸ್ತ್ರಸ್ಯ ಸಿದ್ಧಾರ್ಥಬೋಧಕತ್ವಂ ಪ್ರಸಜ್ಯೇತ । ಬೋಧ್ಯಸ್ಯಾತ್ಮನೋ ಬ್ರಹ್ಮಸ್ವರೂಪತ್ವಾತ್ । ತಸ್ಯ ಚ ಸ್ವಪ್ರಕಾಶತ್ವೇನ ನಿತ್ಯಸಿದ್ಧತ್ವಾತ್ । ಅತಃ**

---

9) ಸ್ವೋಕ್ತಾರ್ಥೇ ಖಂಡನಕಾರಸಂಮತಿಮಾಹ ।। ಯಥಾಽಽಹೇತಿ ।। ತಚ್ಚಾದ್ವೈತಂ ಬ್ರಹ್ಮೈವ ಸ್ಯಾದಿತ್ಯನ್ವಯಃ । ಕುತಃ ? ಯತೋಽಸ್ಮದುಕ್ತಂ ಪ್ರಮೇಯಂ ಬ್ರಹ್ಮೈವೇದಂ ಸರ್ವಮಿತಿ ಶ್ರುತ್ಯರ್ಥೇನ ಸಹೈಕ್ಯಮಾಪನ್ನಂ ಪ್ರಾಪ್ತಮ್ । ಅಸ್ಮಾಭಿರೈಕ್ಯಸ್ಯ ಬ್ರಹ್ಮಾತ್ಮಕತ್ವಮುಚ್ಯತೇ । ಶ್ರುತ್ಯಾ ಚ ಸರ್ವಸ್ಯ ಬ್ರಹ್ಮಾತ್ಮಕತ್ವಮಿಭಿಧೀಯತೇ । ಸರ್ವಮಧ್ಯೇ ಚೈಕ್ಯಂ ಪತಿತಮಿತಿ ತಸ್ಯಾಪಿ ಬ್ರಹ್ಮಾತ್ಮಕತ್ವಂ ಪ್ರಾಪ್ತಮ್ । ತಥಾ ಚಾಸ್ಮದುಕ್ತಂ ಪ್ರಮೇಯಂ ಶ್ರುತ್ಯುಕ್ತಂ ಚ ಪ್ರಮೇಯಮೇಕಮೇವ ಜಾತಮಿತ್ಯರ್ಥಃ । ತಥಾ ಚಾಸ್ಮದುಕ್ತಪ್ರಮೇಯೇ ಶ್ರುತ್ಯಾನುಕೂಲ್ಯಮಾಪ್ಯಸ್ತೀತಿ ಭಾವಃ । (ಶ್ರೀನಿವಾಸತೀರ್ಥೀಯಟಿಪ್ಪಣೀ)

**ಸಿದ್ಧಸಾಧನತಾಪರಿಹಾರಾಯ ಐಕ್ಯಸ್ಯ ಸ್ವರೂಪಾತಿರೇಕೇऽಂಗೀಕ್ರಿಯಮಾಣೇ ಅನ್ಯಥಾಪ್ರತಿಪಾದಕತ್ವಮೇವೇತಿ ।**

**ಅನುವಾದ :-** ಮಾಯಾವಾದಿಗಳು ಶಂಕಿಸುತ್ತಾರೆ -ನಮಗೆ ಈ ರೀತಿ ಅದ್ವೈತಹಾನಿದೋಷ ಬರುತ್ತಿತ್ತು. ಯಾವಾಗ ? ಐಕ್ಯವು ಬ್ರಹ್ಮನಿಂದ ಭಿನ್ನವಾಗಿ ಪರಮಾರ್ಥಸತ್ ಎಂದು ಅಂಗೀಕರಿಸಿದ್ದರೆ. ಆದರೆ 'ಐಕ್ಯವು ಪರಮಾರ್ಥಸತ್ ಆಗಿದೆ. ಕಿಂತು ಬ್ರಹ್ಮಸ್ವರೂಪದಿಂದ ಅಭಿನ್ನವೇ ಆಗಿದೆ ' ಎಂದು ಅಂಗೀಕರಿಸುತ್ತೇವೆ.

'ಖಂಡನಖಂಡನಖಾದ್ಯ' ಗ್ರಂಥಕಾರನಾದ ಶ್ರೀಹರ್ಷನು ಇದನ್ನು ತಿಳಿಸಿದ್ದಾನೆ-

**''ತಚ್ಚಾದ್ವೈತಂ 'ಬ್ರಹ್ಮೈವೇದಂ ಸರ್ವಂ' ಇತಿ ಶ್ರುತ್ಯರ್ಥೇನ ಸಹೈಕ್ಯಮಾಪನ್ನಂ ಹಿ ಬ್ರಹ್ಮೈವ ಸ್ಯಾತ್''**

ಎಂದು. ಅದರ ಅಭಿಪ್ರಾಯ :- ಐಕ್ಯವು ಬ್ರಹ್ಮಾತ್ಮಕವೇ ಆಗುತ್ತದೆ. ಯಾಕೆ ? ನಾವು ಹೇಳಿದ ಪ್ರಮೇಯ, 'ಬ್ರಹ್ಮೈವೇದಂ ಸರ್ವಂ' ಎಂಬ (ಶ್ರುತ್ಯರ್ಥದಿಂದ ಐಕ್ಯವನ್ನು ಹೊಂದುತ್ತದೆ) ಶ್ರುತಿಯು ಹೇಳುವ ಪ್ರಮೇಯ ಎರಡೂ ಒಂದೇ ಆಗುತ್ತದೆ. ನಾವು ಐಕ್ಯಕ್ಕೆ ಬ್ರಹ್ಮಾತ್ಮಕತ್ವವನ್ನು ಹೇಳುತ್ತೇವೆ. ಶ್ರುತಿಯು ಸರ್ವಕ್ಕೂ ಬ್ರಹ್ಮಾತ್ಮಕತ್ವವನ್ನು ಹೇಳುತ್ತದೆ. ಸರ್ವಪದಾರ್ಥಗಳ ಮಧ್ಯದಲ್ಲಿ ಐಕ್ಯವೂ ಸೇರಿದೆಯಾದ್ದರಿಂದ, ಐಕ್ಯಕ್ಕೆ ಬ್ರಹ್ಮಾತ್ಮಕತ್ವವನ್ನು ಶ್ರುತಿಯು ಹೇಳಿದಂತಾಯಿತು. ಹಾಗಾಗಿ ನಾವು ಹೇಳಿದ ಪ್ರಮೇಯ, ಶ್ರುತಿಯು ಹೇಳಿದ ಪ್ರಮೇಯ ಎರಡೂ ಒಂದೇ ಆಯಿತು. ಅಂದಮೇಲೆ ಐಕ್ಯವು ಬ್ರಹ್ಮಾತ್ಮಕವಾಗಿದೆ ಎಂಬ ನಾವು ಹೇಳಿದ ಪ್ರಮೇಯದಲ್ಲಿ ಶ್ರುತ್ಯಾನುಕೂಲ್ಯ ಇದೆ ಎಂದು ಶ್ರೀಹರ್ಷನ ಮಾತಿನ ಅಭಿಪ್ರಾಯ.

ಹೀಗೆ ಬ್ರಹ್ಮನಿಂದ ಅಭಿನ್ನವಾದ, ಪರಮಾರ್ಥಸತ್ ಆದ ಐಕ್ಯವನ್ನು ಪ್ರತಿಪಾದನೆ ಮಾಡುವ ಶಾಸ್ತ್ರವು ಅನ್ಯಥಾಪ್ರತಿಪಾದಕ ಹೇಗಾಗುತ್ತದೆ ? ಎಂಬುದಾಗಿ ಶಂಕೆ ಬಂದರೆ, ಅದಕ್ಕಾಗಿ ಹೇಳುತ್ತಾರೆ -

**ಅನತಿರೇಕೇ ಸ್ವಪ್ರಕಾಶತ್ವಾದಾತ್ಮನಃ ಸಿದ್ಧಸಾಧನತಾ ।** (ಮೂಲ)

ಐಕ್ಯವು ಬ್ರಹ್ಮನಿಂದ ಅಭಿನ್ನ ಎಂದು ಹೇಳುವುದಾದರೆ, ಆತ್ಮನು ಸ್ವಪ್ರಕಾಶನಾದ್ದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತಾ (ಸಿದ್ಧಾರ್ಥಬೋಧಕತ್ವ) ಬರಬೇಕಾಗುತ್ತದೆ ಎಂದು ಮೂಲಾರ್ಥ.

ಒಂದುವೇಳೆ ಐಕ್ಯವು ಬ್ರಹ್ಮಸ್ವರೂಪದಿಂದ ಅಭಿನ್ನವಾಗುವುದಾದರೆ ಆಗ ಶಾಸ್ತ್ರಕ್ಕೆ ಸಿದ್ಧಾರ್ಥಬೋಧಕತ್ವವು ಬರಬೇಕಾಗುತ್ತದೆ. ಯಾಕೆಂದರೆ - ಶ್ರುತಿಬೋಧ್ಯನಾದ (ಶ್ರುತಿಯಿಂದ ಐಕ್ಯವನ್ನು ತಿಳಿಯಬೇಕಾದ) ಜೀವನು ಬ್ರಹ್ಮಸ್ವರೂಪನಾಗಿದ್ದಾನೆ. ಅಂತಹ ಜೀವನಾದರೋ ಸ್ವಪ್ರಕಾಶನಾದ್ದರಿಂದ 'ಮಾಮಹಂ ಜಾನಾಮಿ' ಎಂಬ ಸಾಕ್ಷಿಪ್ರತ್ಯಕ್ಷದಿಂದ ನಿತ್ಯಸಿದ್ಧನಾಗಿದ್ದಾನೆ. ಸಿದ್ಧನಾದ ಜೀವನಿಂದ ಅಭಿನ್ನವಾದ ಐಕ್ಯವೂ ನಿತ್ಯಸಿದ್ಧವಾಯಿತು. ಅಂತಹ ಸಿದ್ಧವಾದ ಐಕ್ಯವನ್ನೇ ಬೋಧಿಸುವ ಶಾಸ್ತ್ರವು ಸಿದ್ಧಾರ್ಥಬೋಧಕವಾಗಬೇಕಾಗುತ್ತದೆ.

ಆದ್ದರಿಂದ ಸಿದ್ಧಸಾಧನತಾ ಪರಿಹಾರಕ್ಕಾಗಿ ಐಕ್ಯವು ಬ್ರಹ್ಮನಿಂದ ಭಿನ್ನ (ಮತ್ತು ಅಯಥಾರ್ಥ) ಎಂದೇ ಹೇಳಬೇಕು. ಹಾಗಾದರೆ ಶಾಸ್ತ್ರಕ್ಕೆ ಅನ್ಯಥಾಪ್ರತಿಪಾದಕತ್ವವು ಬಂದೇ ಬರುತ್ತದೆ ಎಂದು ಭಾವ.

**ಟೀಕಾ :- ಅಯಂ ಚ ದೋಷಃ ಸ್ವಮತರೀತ್ಯೈವೋಕ್ತ ಇತಿ ಮಂತವ್ಯಮ್। '[10]ಸ್ವವಿಷಯಪ್ರಕಾಶತ್ವಂ ಸ್ವಪ್ರಕಾಶತ್ವಂ' ಇತಿ ಸ್ವಮತೇಽಂಗೀಕಾರಾತ್ । ಪರರೀತ್ಯಾ ತು ಸ್ವಪ್ರಕಾಶತ್ವಾದಾತ್ಮನಃ ಶಾಸ್ತ್ರಸ್ಯಾಪ್ರತಿಪಾದಕತ್ವಂ ಸ್ಯಾತ್ । 'ಅವೇದ್ಯತ್ವಂ ಸ್ವಪ್ರಕಾಶತ್ವಂ' ಇತ್ಯಂಗೀಕಾರಾದಿತಿ ದೂಷಣಂ ದ್ರಷ್ಟವ್ಯಂ ।**

**ಅನುವಾದ :-** ''ಅನತಿರೇಕೇ ಸ್ವಪ್ರಕಾಶತ್ವಾದಾತ್ಮನಃ ಸಿದ್ಧಸಾಧನತಾ'' ಎಂಬ ವಾಕ್ಯದಿಂದ ಹೇಳಿದ ಈ ಸಿದ್ಧಸಾಧನತಾದೋಷ ಏನಿದೆ ಇದು ಸ್ವಮತರೀತಿಯಿಂದಲೇ ಹೇಳಿದ್ದು ಎಂದು ತಿಳಿಯಬೇಕು. ಕಾರಣ 'ಸ್ವವಿಷಯಪ್ರಕಾಶತ್ವಂ ಸ್ವಪ್ರಕಾಶತ್ವಂ' ಎಂಬುದಾಗಿ ಸ್ವಮತದಲ್ಲಿ ಅಂಗೀಕರಿಸಿದ್ದರಿಂದ.

---

10) ಆತ್ಮನು ಸ್ವಪ್ರಕಾಶನಾಗಿದ್ದಾನೆ. ಸ್ವಪ್ರಕಾಶ ಎಂದರೆ ಸ್ವವಿಷಯಪ್ರಕಾಶ ಎಂದರ್ಥ. ಅಂದರೆ ಘಟದ ಜ್ಞಾನ ಬಂದಾಗ ಘಟವು ಬೇರೆ, ಘಟದ ಜ್ಞಾನ ಬೇರೆ. ಘಟ-ಘಟಜ್ಞಾನಗಳಲ್ಲಿ ಭೇದವಿದೆ. ಹೀಗಾಗಿ ಘಟವು ಸ್ವವಿಷಯಪ್ರಕಾಶ ಅಲ್ಲ. (ತಾನು ಯಾವ ಜ್ಞಾನದಲ್ಲಿ ವಿಷಯವಾಗಿದೆಯೋ ಆ ಜ್ಞಾನರೂಪವೇ ಆಗಿಲ್ಲ.) ಅಂತೆಯೇ ಅದು ಸ್ವಪ್ರಕಾಶ ಅಲ್ಲ.

ಹಾಗೆ ಆತ್ಮ ಅಲ್ಲ. ಆತ್ಮನ ಜ್ಞಾನ ಬಂದಾಗ, ಆತ್ಮ ಬೇರೆ ಜ್ಞಾನ ಬೇರೆ ಎಂದಿಲ್ಲ. ಆತ್ಮ-ಆತ್ಮಜ್ಞಾನಗಳಲ್ಲಿ ಅಭೇಧವಿದೆ. ಹೀಗಾಗಿ ಆತ್ಮನು ಸ್ವವಿಷಯಪ್ರಕಾಶನಾಗಿದ್ದಾನೆ. (ತಾನು ಯಾವ ಜ್ಞಾನದಲ್ಲಿ ವಿಷಯನಾಗಿದ್ದಾನೆಯೋ ಆ ಜ್ಞಾನರೂಪನೇ ಆಗಿದ್ದಾನೆ). ಅಂತೆಯೇ ಆತ್ಮನು ಸ್ವಪ್ರಕಾಶ. 'ಮಾಮಹಂ ಜಾನಾಮಿ' ಎಂದು ಪ್ರತೀತಿ ಬರುವುದರಿಂದ ಆತ್ಮನು ತಾನೇ ಜ್ಞಾನ, ತಾನೇ ಜ್ಞಾನಕ್ಕೆ ಆಧಾರ, ತಾನೇ ಜ್ಞಾನಕ್ಕೆ ಕರ್ಮ ಎಂದು ತಿಳಿಯುತ್ತದೆ. ಇದೇ ಆತ್ಮನು ಸ್ವಪ್ರಕಾಶನಾಗಿದ್ದಾನೆ ಎಂಬುದರ ಅರ್ಥ.

ಆತ್ಮನು ಸ್ವಪ್ರಕಾಶನಾಗಿದ್ದಾನೆ (ಸ್ವವಿಷಯಪ್ರಕಾಶನಾಗಿದ್ದಾನೆ- ಜ್ಞಾನವಿಷಯ-ನಾಗಿದ್ದಾನೆ-ಜ್ಞಾತನಾಗಿದ್ದಾನೆ) ಎಂದಮೇಲೆ ಅವನಿಂದ ಅಭಿನ್ನವಾದ ಐಕ್ಯವೂ ಸಿದ್ಧವಾದಂತಾಯಿತು. ಅಂತಹ ಸಿದ್ಧವಾದ ಐಕ್ಯವನ್ನು ಪ್ರತಿಪಾದಿಸುವ ಶಾಸ್ತ್ರಕ್ಕೆ ಸಿದ್ಧಸಾಧನತಾ (ಸಿದ್ಧಾರ್ಥಬೋಧಕತ್ವ) ದೋಷ ಬರುತ್ತದೆ ಎಂಬುದಾಗಿ ಸ್ವಮತರೀತ್ಯಾ ಹೇಳಿದ ದೋಷ ಎಂದು ಭಾವ.

ಪರಸಿದ್ಧಾಂತಪ್ರಕಾರವಾಗಿ ಹೇಳುವುದಾದರೆ - 'ಅವೇದ್ಯತ್ವಂ ಸ್ವಪ್ರಕಾಶತ್ವಂ' ಎಂದು ಪರರು ಅಂಗೀಕರಿಸಿದ್ದರಿಂದ, ಆತ್ಮನು ಸ್ವಪ್ರಕಾಶನಾದ್ದರಿಂದ (ಅವೇದ್ಯನಾದ್ದರಿಂದ -ಜ್ಞಾನಅವಿಷಯನಾಗಿದ್ದರಿಂದ) ಅವನಿಂದ ಅಭಿನ್ನವಾದ ಐಕ್ಯವೂ ಅವೇದ್ಯವಾಗುತ್ತದೆ. (ಜ್ಞಾನಕ್ಕೆ ವಿಷಯವಾಗದ ವಸ್ತುವಾಗುತ್ತದೆ.) ಶಾಸ್ತ್ರಕ್ಕೆ ವಿಷಯವಾಗಬೇಕಾದ ಐಕ್ಯವು ಅವೇದ್ಯವಾದರೆ, ಶಾಸ್ತ್ರವು ಐಕ್ಯವನ್ನು ಪ್ರತಿಪಾದಿಸಲು ಸಾಧ್ಯವಿಲ್ಲವಾದ್ದರಿಂದ ಶಾಸ್ತ್ರಕ್ಕೆ ಅಪ್ರತಿಪಾದಕತ್ವ ಬರಬೇಕಾಗುತ್ತದೆ ಎಂಬ ದೋಷವನ್ನು ತಿಳಿಯುವುದು.

**ವಿಶೇಷವಿಚಾರ :-** ಶ್ರೀವ್ಯಾಸರಾಜರು ತಮ್ಮ 'ಮಂದಾರಮಂಜರಿ'ಯಲ್ಲಿ ಕೆಲವು ವಿಶೇಷ ವಿಚಾರಗಳನ್ನು ನಿರೂಪಿಸಿರುತ್ತಾರೆ. ಆ ವಿಶೇಷವಿಚಾರಗಳನ್ನು ಸಂಗ್ರಹರೂಪವಾಗಿ ಇಲ್ಲಿ ಉದಾಹರಿಸುವುದಾದರೆ -

ವಿ. ವಿ. **1**) ಯದ್ಯಪಿ ಪ್ರತಿವಾದಿಗಳು ತಮ್ಮ ಗ್ರಂಥಗಳಲ್ಲಿ -

**''ಸ್ವಪ್ರಕಾಶಾತ್ಮಮಾತ್ರಸ್ಯ ಸ್ವತಃ ಸಿದ್ಧಿಸಂಭವೇನ''**
**''ಸ್ವತಃಸಿದ್ಧತಾಯಾಮಪಿ ತದುಪಪತ್ತೇಃ''**
**''ವಿಜ್ಞಾನಮೇವ ಸ್ವಪರಪ್ರಕಾಶಸ್ವಭಾವಂ ಪ್ರಕಾಶತೇ''**
**''ಸ್ವಭಾವಭೇದಾದೇವ ಚ ಸ್ವಾತ್ಮನಿ ವ್ಯವಹಾರಂ ಕುರ್ಯಾತ್ ''**

ಎಂಬುದಾಗಿ ಅಲ್ಲಲ್ಲಿ ಹೇಳುವವರಾಗಿ ಸ್ವಪ್ರಕಾಶನಾದ ಆತ್ಮನಿಗೆ ಸ್ವಕರ್ಮತ್ವ ಇಲ್ಲದೇ ಹೋದರೂ ಸಹ ಸ್ವಜನ್ಯವ್ಯವಹಾರವಿಷಯತ್ವಯೋಗ್ಯತ್ವರೂಪವಾದ ಸ್ವತಃಸಿದ್ಧತ್ವವನ್ನು ಅಂಗೀಕರಿಸಿದ್ದಾರೆ. ಅಂತಹ ಸ್ವತಃಸಿದ್ಧನಾದ ಆತ್ಮನಿಂದ ಅಭಿನ್ನವಾದ ಐಕ್ಯವನ್ನು ಬೋಧಿಸುವ ಶಾಸ್ತ್ರಕ್ಕೆ ಸಿದ್ಧಸಾಧನತ್ವವನ್ನು ಪರರೀತಿಯಿಂದಲೇನೇ ಹೇಳಲು ಶಕ್ಯವಿದೆಯಾದ್ದರಿಂದ, ಪರನ್ಯಾಯದಿಂದ ಪರಮತನಿರಾಕರಣಪರವಾಗುವ ಸ್ವಾರಸ್ಯದಿಂದಲೇನೇ ''ಅನತಿರೇಕೇ ಸ್ವಪ್ರಕಾಶತ್ವಾದಾತ್ಮನಃ ಸಿದ್ಧಸಾಧನತಾ'' ಎಂಬ ಮೂಲಗ್ರಂಥವನ್ನು ವ್ಯಾಖ್ಯಾನ ಮಾಡಲು ಶಕ್ಯವಿದೆ.

ಆದರೂ ಸಹ ಸ್ವಮತಾನುಸಾರವಾಗಿ ಸಂವಿದ್ವಿಷಯತ್ವವನ್ನೇ ಸಿದ್ಧಿ(ಸ್ವತಃಸಿದ್ಧತ್ವ) ಶಬ್ದಾರ್ಥವನ್ನಾಗಿ ತಿಳಿದು, ಪರರು ಸಂವಿದ್ವಿಷಯತ್ವವನ್ನು ಆತ್ಮನಲ್ಲಿ ಅಂಗೀಕರಿಸಿಲ್ಲವಾದ್ದರಿಂದ, ಸಂವಿದ್ವಿಷಯತ್ವರೂಪವಾದ ಸ್ವತಃಸಿದ್ಧತ್ವವು ಆತ್ಮನಲ್ಲಿ ಇಲ್ಲವಾದ್ದರಿಂದ ಪರರೀತ್ಯಾ ಸಿದ್ಧಸಾಧನತ್ವವನ್ನು ಹೇಳಲು ಶಕ್ಯವಿಲ್ಲ ಎಂಬ ಅಭಿಪ್ರಾಯದಿಂದ 'ಸ್ವಮತರೀತ್ಯಾ ಸಿದ್ಧಸಾಧನತಾದೋಷ ಹೇಳಿದ್ದು' ಎಂದು ಟೀಕಾಕೃತ್ಪಾದರು ಹೇಳಿದ್ದಾರೆ ಎಂಬುದಾಗಿ ತಿಳಿಯಬೇಕು.

**ವಿ.ವಿ. 2)** ಹೌದು, ''ಪರರು ಅವೇದ್ಯತ್ವಂ ಸ್ವಪ್ರಕಾಶತ್ವಂ ಎಂದು ಅಂಗೀಕರಿಸುವುದರಿಂದ ಅವೇದ್ಯನಾದ ಆತ್ಮನಿಂದ ಅಭಿನ್ನವಾದ ಐಕ್ಯವೂ ಅವೇದ್ಯವಾಯಿತು. ಶಾಸ್ತ್ರವು ಅಂತಹ ಅವೇದ್ಯವಾದ (ಜ್ಞಾನವಿಷಯವಾಗದ) ಐಕ್ಯವನ್ನು ಪ್ರತಿಪಾದಿಸಲು ಸಾಧ್ಯವಿಲ್ಲವಾದ್ದರಿಂದ ಶಾಸ್ತ್ರಕ್ಕೆ ಅಪ್ರತಿಪಾದಕತ್ವ ಬರಬೇಕಾಗುತ್ತದೆ'' ಎಂಬುದಾಗಿ ಹೇಳುವುದು ಹೇಗೆ ಸಮಂಜಸವಾಗುತ್ತದೆ ?

ಯಾಕೆಂದರೆ - ಅವೇದ್ಯತ್ವಂ ಸ್ವಪ್ರಕಾಶತ್ವಂ ಎಂದರೆ ಯಾವ ಜ್ಞಾನಕ್ಕೂ ವಿಷಯನಾಗುವುದಿಲ್ಲ ಎಂದು ಅರ್ಥವಲ್ಲ. ಕಿಂತು ಚಿತ್ಕರ್ಮತ್ವಾಭಾವ (ಚಿದ್ರೂಪ-ಜ್ಞಾನದಲ್ಲಿ ವಿಷಯನಲ್ಲ) ಎಂದೇ ಅರ್ಥವೇ ಹೊರತು ವೃತ್ತಿವ್ಯಾಪ್ಯತ್ವಾಭಾವ (ವೃತ್ತಿರೂಪಜ್ಞಾನದಲ್ಲಿಯೂ ವಿಷಯನಲ್ಲ) ಎಂದು ಅರ್ಥವಲ್ಲ. ಹೀಗಾಗಿ ಶಾಸ್ತ್ರಜನಿತವೃತ್ತಿವ್ಯಾಪ್ಯತ್ವಮಾತ್ರದಿಂದ ಶಾಸ್ತ್ರಕ್ಕೆ ತತ್ಪ್ರತಿಪಾದಕತ್ವವು ಉಪಪನ್ನವಾಗುವುದರಿಂದ, ಆತ್ಮನಿಗೆ ಚಿತ್ಕರ್ಮತ್ವ ಇಲ್ಲದ ಮಾತ್ರದಿಂದ ಶಾಸ್ತ್ರಕ್ಕೆ ಅಪ್ರತಿಪಾದಕತ್ವವನ್ನು ಹೇಳಲು ಶಕ್ಯವಿಲ್ಲ ಎಂಬುದಾಗಿ ಶಂಕೆ ಬಂದರೆ, ಈ ವಿಧವಾದ ಪರಮತಸ್ಥಿತಿಯು ಸತ್ಯವಾಗಿದೆ.

ಆದರೂ ಸಹ, ಅವೇದ್ಯತ್ವಂ ಸ್ವಪ್ರಕಾಶತ್ವಂ ಎನ್ನುವಲ್ಲಿ ಸ್ವಪ್ರಕಾಶತ್ವ ಎಂದರೆ ಚಿತ್ಕರ್ಮತ್ವಾಭಾವ ಎಂದು ಹೇಳುವುದಾದರೆ ಘಟಾದಿಗಳಿಗೂ ಚಿದ್ವಿಷಯತ್ವ ಹೇಳಿದರೆ ಸುಖಾದಿಗಳಂತೆ ಜ್ಞಾತೈಕಸತ್ವ ಬರಬೇಕಾದ ಪ್ರಸಂಗ ಬರುವುದರಿಂದ ಘಟಾದಿಗಳಿಗೆ ಚಿತ್ಕರ್ಮತ್ವಾಭಾವವನ್ನು ಅವಶ್ಯವಾಗಿ ಹೇಳಬೇಕು. ಹಾಗಾಗಿ ಘಟಾದಿಗಳಿಗೂ ಚಿತ್ಕರ್ಮತ್ವಾಭಾವರೂಪವಾದ ಸ್ವಪ್ರಕಾಶತ್ವ ಬರಬೇಕಾಗುತ್ತದೆ.

ಘಟಾದ್ಯವಚ್ಛಿನ್ನಚೈತನ್ಯಾವರಕವಾದ ಅಜ್ಞಾನದ ನಿವೃತ್ತಿಗಾಗಿ ವೃತ್ತಿಯು ಅಪೇಕ್ಷಿತವಾದ್ದರಿಂದ ಘಟಾದಿಗಳಿಗೆ ಜ್ಞಾತೈಕಸತ್ವ ಇಲ್ಲ ಎಂದು ಹೇಳುವುದು ಸರಿಯಲ್ಲ. ಕಾರಣ ಅದೇ ಕಾರಣಕ್ಕಾಗಿಯೇ (ಸುಖಾದ್ಯವಚ್ಛಿನ್ನಚೈತನ್ಯಾವರಕವಾದ ಅಜ್ಞಾನದ

ನಿವೃತ್ತಿಗಾಗಿ ವೃತ್ತಿಯು ಅಪೇಕ್ಷಿತವಾಗುವುದರಿಂದಲೇನೇ) ಸುಖಾದಿಗಳಿಗೂ ಜ್ಞಾತೈಕಸತ್ವ ಇಲ್ಲದೇ ಹೋಗಬೇಕಾದ ಅತಿಪ್ರಸಂಗ ಬರುತ್ತದೆ.

ಹೌದು, ಸುಖಾದ್ಯವಚ್ಛಿನ್ನಚೈತನ್ಯವು ಅಜ್ಞಾನಾವೃತವೇ ಆಗುವುದಿಲ್ಲ ಎಂದರೆ, ಅನಾವೃತಚೈತನ್ಯಪ್ರದೇಶಾವಚ್ಛಿನ್ನವಾಗಿಯೇ ಸುಖದುಃಖಾದಿಗಳು ಹುಟ್ಟುತ್ತವೆಯೋ ? ಅಥವಾ ಸುಖಾದಿಗಳು ಉತ್ಪನ್ನವಾದ ನಂತರವೇ ಸುಖಾದ್ಯವಚ್ಛಿನ್ನವಾದ ಚೈತನ್ಯವು ಅನಾವೃತವಾಗುತ್ತದೆಯೋ ?

ಅನಾವೃತಚೈತನ್ಯಪ್ರದೇಶಾವಚ್ಛಿನ್ನವಾಗಿಯೇ ಸುಖದುಃಖಾದಿಗಳು ಹುಟ್ಟುತ್ತವೆ ಎಂಬ ಮೊದಲನೇ ಪಕ್ಷ ಸರಿಯಲ್ಲ. ಕಾರಣ-ಅನಿಯತದೇಶ ಉಳ್ಳ, ಅಂತಃಕರಣಸಂಬಂಧಿಗಳಾದ ಅನಂತಸುಖಾದಿಗಳಿಗೆ ನಿಯತೈಕಚೈತನ್ಯಪ್ರದೇಶಸಂಬಂಧಿಯಾಗಿ ಉತ್ಪತ್ತಿಯು ಅನುಪಪನ್ನವಾಗುವುದರಿಂದ ಅನಿಯತ-ಅನಂತಪ್ರದೇಶಗಳಿಗೆ ಅನಾವೃತತ್ವವನ್ನು ಹೇಳಬೇಕಾಗುವುದರಿಂದ ತತ್ತದ್ದೇಶಸಂಬಂಧಿಯಾಗಿ ಉತ್ಪನ್ನವಾಗುವ ಘಟಾದಿಗಳಿಗೂ ಜ್ಞಾತೈಕಸತ್ವ ಬರಬೇಕಾದ ಪ್ರಸಂಗ ಬರುತ್ತದೆ.

ಇನ್ನು ಸುಖಾದಿಗಳು ಉತ್ಪನ್ನವಾದ ನಂತರವೇ ಸುಖಾದ್ಯವಚ್ಛಿನ್ನವಾದ ಚೈತನ್ಯವು ಅನಾವೃತವಾಗುತ್ತದೆ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ ತದ್ವಿಷಯಕವೃತ್ತಿಯೇ ತದಜ್ಞಾನಕ್ಕೆ ನಿವರ್ತಕವಾಗುವುದರಿಂದ, ದುಃಖಾದಿಗಳು ಅಜ್ಞಾನಿವರ್ತಕವಾಗುವುದಿಲ್ಲವಾದ್ದರಿಂದ, ಅಜ್ಞಾನನಿವೃತ್ತಿಗಾಗಿ ದುಃಖಾದಿವಿಷಯಕ-ವೃತ್ತಿಯನ್ನು ಅಂಗೀಕರಿಸಬೇಕಾದ್ದರಿಂದ, ಘಟಾದಿಗಳಂತೆ ದುಃಖಾದಿಗಳಿಗೂ ಜ್ಞಾತೈಕಸತ್ವವು ಉಪಪನ್ನವಾಗುವುದಿಲ್ಲ.

ಆದ್ದರಿಂದ ದುಃಖಾದಿಗಳು ಜ್ಞಾತೈಕಸತ್ ಆಗಿವೆ, ಘಟಾದಿಗಳು ಜ್ಞಾತೈಕಸತ್ ಆಗಿಲ್ಲ ಎಂಬ ವ್ಯವಸ್ಥೆಯನ್ನು ಮಾಡುವುದಕ್ಕಾಗಿ ಘಟಾದಿಗಳಿಗೆ ಚಿತ್ಕರ್ಮತ್ವಾಭಾವವನ್ನು ಅವಶ್ಯವಾಗಿ ಹೇಳಬೇಕಾದ್ದರಿಂದ, ಅಂತಹ ಚಿತ್ಕರ್ಮತ್ವಾಭಾವವೇ ಸ್ವಪ್ರಕಾಶತ್ವ ರೂಪವಾಗುವುದಾದರೆ ಘಟಾದಿಗಳಿಗೂ ಸ್ವಪ್ರಕಾಶತ್ವ ಬರಬೇಕಾಗುವುದರಿಂದ, ಅದರ ಪರಿಹಾರಕ್ಕಾಗಿ ಸ್ವಪ್ರಕಾಶತ್ವ ಎಂದರೆ ವೃತ್ತಿವ್ಯಾಪ್ಯತ್ವಾಭಾವ ಎಂದು ಹೇಳಬೇಕಾಗುತ್ತದೆ.

ಪ್ರಕೃತ ಆತ್ಮನಿಗೆ ವೃತ್ತಿವ್ಯಾಪ್ಯತ್ವಾಭಾವರೂಪ ಸ್ವಪ್ರಕಾಶತ್ವವನ್ನು ಹೇಳುವುದಾದರೆ (ಆತ್ಮನು ವೃತ್ತಿಜ್ಞಾನಕ್ಕೂ ವಿಷಯನಲ್ಲ ಎಂದು ಹೇಳುವುದಾದರೆ) ಅವನಿಂದ ಅಭಿನ್ನವಾದ ಐಕ್ಯವೂ ಅವೇದ್ಯವೇ (ವೃತ್ತಿಜ್ಞಾನಕ್ಕೂ ವಿಷಯವಲ್ಲ ಎಂದೇ) ಆಗುತ್ತದೆ. ಹಾಗಾಗಿ

ಶಾಸ್ತ್ರಕ್ಕೆ ಐಕ್ಯಪ್ರತಿಪಾದಕತ್ವವು ಕೂಡುವುದಿಲ್ಲ (ಅಪ್ರತಿಪಾದಕತ್ವ ಬರಬೇಕಾಗುತ್ತದೆ) ಎಂಬುದಾಗಿ ಆಪಾದನವು ವಿವಕ್ಷಿತವಾದ್ದರಿಂದ ಯಾವ ದೋಷಕ್ಕೂ ಅವಕಾಶವಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ''ಸ್ವಪ್ರಕಾಶನಾದ ಆತ್ಮನು ನಿತ್ಯಸಿದ್ಧನಾದ್ದರಿಂದ ಅಂತಹ ಸಿದ್ಧನಾದ ಆತ್ಮನಿಂದ ಅಭಿನ್ನವಾದ ಐಕ್ಯವೂ ನಿತ್ಯಸಿದ್ಧವಾಗುತ್ತದೆ. ಸಿದ್ಧವಾದ ಐಕ್ಯವನ್ನೇ ಪ್ರತಿಪಾದನೆ ಮಾಡಿದರೆ ಶಾಸ್ತ್ರಕ್ಕೆ ಸಿದ್ಧಸಾಧನತಾದೋಷ ಬರುತ್ತದೆ'' ಎಂಬುದಾಗಿ ನಾವು ಹೇಳಿದ ಸಿದ್ಧಸಾಧನತಾದೋಷವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ -

**ಟೀಕಾ :- ನನು ಸ್ವಪ್ರಕಾಶತಯಾ ಆತ್ಮಸ್ವರೂಪಸ್ಯ ಸಿದ್ಧತ್ವೇಽ[11] ಪ್ಯದ್ವೈತಾದಿವಿಶೇಷಾಕಾರೇಣಾನಧಿಗತತ್ವಾನ್ನ ಶಾಸ್ತ್ರಸ್ಯ ಸಿದ್ಧಸಾಧನತ್ವಾದಿಕಮ್ । ಯಥಾ ಖಲು ಭವತಾಂ [12]ಗುಣಗುಣಿನೋರಭೇದೇಽಪಿ ಗುಣಿನಃ ಸ್ಪರ್ಶನೇನೋಪಲಂಭೇ ರೂಪಸ್ಯಾನಧಿಗತಿರೇವಮಿತಿ । ಅತ ಆಹ -**

**- ಮಾಯಾವಾದಖಂಡನ -**

ನಿರ್ವಿಶೇಷತ್ವಾದಾತ್ಮನೋ ನಾನಧಿಗತೋ ವಿಶೇಷಃ ।

**ಸ್ಯಾದೇವಂ, ಘಟೋಪಲಂಭೇಽಪಿ ತದ್ರೂಪಾನುಪಲಬ್ಧಿಃ । ಯತೋ ರೂಪಂ ಘಟಾಭಿನ್ನಮಪಿ ತದ್ವಿಶೇಷತಯಾ[13] ಅಂಗೀಕ್ರಿಯತೇ, ನ ತು ತನ್ಮಾತ್ರಮ್ । ನ ಚೈಕ್ಯಮಪಿ ಆತ್ಮಾಭಿನ್ನಂ ತದ್ವಿಶೇಷಃ । ಯೇನ ಆತ್ಮನಿ ಸಿದ್ಧೇಽಪ್ಯನಧಿಗತಮಿತಿ ಯುಕ್ತಮ್ । ಆತ್ಮಸ್ವರೂಪಸ್ಯ [14]ನಿರ್ವಿಶೇಷತ್ವಾಂಗೀಕಾರಾದಿತಿ ।**

---

11) ಅದ್ವೈತರೂಪಃ ಕಶ್ಚನ ವಿಶೇಷಾಕಾರಃ ತೇನ ರೂಪೇಣೇತ್ಯರ್ಥಃ । (ಶ್ರೀನಿ)

12) ಗುಣಗುಣಿನೋರಿತಿ ॥ ಯಾವದ್ದ್ರವ್ಯಭಾವಿಗುಣಗುಣಿನೋರಿತ್ಯರ್ಥಃ । ಅಯಾವದ್ದ್ರವ್ಯಭಾವಿಗುಣಗುಣಿನೋಃ ಸಿದ್ಧಾಂತೇ ಅತ್ಯಂತಾಭೇದಾಭಾವೇನ ದೃಷ್ಟಾಂತೀಕರಣಾನುಪಪತ್ತೇರಿತಿ । (ಮಂದಾರಮಂಜರೀ).

13) ಅ) ತದ್ವಿಶೇಷತಯಾ ಅಂಗೀಕ್ರಿಯತ ಇತಿ ॥ ಭೇದಪ್ರತಿನಿಧಿರೂಪ- ವಿಶೇಷಾಶ್ರಯೀ-ಭೂತಧರ್ಮತಯಾ ಅಂಗೀಕ್ರಿಯತ ಇತ್ಯರ್ಥಃ । (ಮಂದಾರಮಂಜರೀ)

ಆ) ಭೇದಪ್ರತಿನಿಧಿರೂಪವಿಶೇಷಾಶ್ರಯನಿಷ್ಠತದ್ಧರ್ಮತಯೇತ್ಯರ್ಥಃ । (ಶ್ರೀನಿ)

**ಅನುವಾದ :-** ಯಾವ ರೀತಿಯಾಗಿ ನಿಮ್ಮ ಮತದಲ್ಲಿ (ಯಾವದ್ದ್ರವ್ಯಭಾವಿಯಾದ) ಗುಣ-ಗುಣಿಗಳಲ್ಲಿ ಅಭೇದವಿದ್ದರೂ ಸಹ ಗುಣಿಯು (ಘಟವು) ಸ್ಪಾರ್ಶನಪ್ರತ್ಯಕ್ಷದಿಂದ ಉಪಲಬ್ಧವಾದರೂ ಸಹ ಗುಣವು (ರೂಪಾದಿಗಳು) ಸ್ಪಾರ್ಶನಪ್ರತ್ಯಕ್ಷದಿಂದ ಉಪಲಬ್ಧವಾಗುವುದಿಲ್ಲವೋ, ಅದೇ ರೀತಿಯಾಗಿ ಸ್ವಪ್ರಕಾಶವಾದದ್ದರಿಂದ ಬ್ರಹ್ಮಸ್ವರೂಪವು ಸಿದ್ಧವಾಗಿದ್ದರೂ ಸಹ ಅಭೇದರೂಪವಾದ ವಿಶೇಷಾಕಾರದಿಂದ ವಿಶಿಷ್ಟನಾಗಿ ಸಿದ್ಧನಾಗಿಲ್ಲವಾದ್ದರಿಂದ ಅಂದರೆ ಐಕ್ಯ ಎಂಬ ವಿಶೇಷಾಕಾರವು ಸಿದ್ಧವಾಗಿಲ್ಲವಾದ್ದರಿಂದ ಅದ್ವೈತಪ್ರತಿಪಾದಕವಾದ ಶಾಸ್ತ್ರಕ್ಕೆ ಸಿದ್ಧಸಾಧನತಾ ಬರುವುದಿಲ್ಲ.

ಮತ್ತು ''ಬ್ರಹ್ಮನು ವೃತ್ತಿಗೆ ಅವಿಷಯನಾದ್ದರಿಂದ ತದಾತ್ಮಕವಾದ ಐಕ್ಯವೂ ವೃತ್ತಿಗೆ ಅವಿಷಯವಾಗುವುದರಿಂದ ಶಾಸ್ತ್ರಕ್ಕೆ ಅಪ್ರತಿಪಾದಕತ್ವ ಬರುತ್ತದೆ '' ಎಂಬುದಾಗಿ ಏನು ಹೇಳಿದಿರಿ ಆ ಅಪ್ರತಿಪಾದಕತ್ವದೋಷವೂ ಬರುವುದಿಲ್ಲ. ಏಕೆಂದರೆ - ಪೃಥಿವಿಯು ಘ್ರಾಣೇಂದ್ರಿಯಕ್ಕೆ ವಿಷಯವಾಗದಿದ್ದರೂ ಸಹ ಗಂಧವು ಘ್ರಾಣೇಂದ್ರಿಯಕ್ಕೆ ವಿಷಯವಾಗುವಂತೆ, ಬ್ರಹ್ಮನು ವೃತ್ತಿಗೆ ಅವಿಷಯನಾದರೂ ಸಹ ಐಕ್ಯವು ವೃತ್ತಿಗೆ ವಿಷಯವಾಗಬಹುದಾಗಿದೆ. ಆದ್ದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತ್ವಾದಿ ದೋಷಗಳು ಬರುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದಕ್ಕಾಗಿ ಹೇಳಿದರು -

**ನಿರ್ವಿಶೇಷತ್ವಾದಾತ್ಮನೋ ನಾನಾಧಿಗತೋ ವಿಶೇಷಃ ।** (ಮೂಲ)

ಅದ್ವೈತಸಿದ್ಧಾಂತದಲ್ಲಿ ಆತ್ಮನು ನಿರ್ವಿಶೇಷನಾದ್ದರಿಂದ (ಆತ್ಮನಲ್ಲಿ ಯಾವ ವಿಶೇಷವನ್ನೂ ಒಪ್ಪಿಲ್ಲವಾದ್ದರಿಂದ) ಆತ್ಮನು ತಿಳಿಯಲ್ಪಟ್ಟಾಗ ತಿಳಿಯಲ್ಪಡದ ಯಾವ ವಿಶೇಷವೂ ಇರಲು ಸಾಧ್ಯವಿಲ್ಲ ಎಂದು ಮೂಲಾರ್ಥ.

ದೃಷ್ಟಾಂತ-ದಾರ್ಷ್ಟಾಂತಿಕಗಳಲ್ಲಿ ವೈಷಮ್ಯವನ್ನು ಉಪಪಾದನೆ ಮಾಡುತ್ತಾರೆ ''ಸ್ಯಾದೇವಂ'' ಇತ್ಯಾದಿ ವಾಕ್ಯಗಳಿಂದ. ಸ್ಪಾರ್ಶನಪ್ರತ್ಯಕ್ಷದಿಂದ ಘಟವು ಉಪಲಬ್ಧವಾದರೂ ಸಹ ಆ ಘಟದ ರೂಪವು ಉಪಲಬ್ಧವಾಗುವುದಿಲ್ಲ ಎನ್ನುವುದು ನಮ್ಮ ಸಿದ್ಧಾಂತದಲ್ಲಿ ಕೂಡುತ್ತದೆ. ಯಾಕೆಂದರೆ - ರೂಪವು ಘಟದಿಂದ ಅಭಿನ್ನವಾದರೂ ಸಹ ಘಟದ ವಿಶೇಷ (ಭೇದಪ್ರತಿನಿಧಿಯಾದ ವಿಶೇಷಕ್ಕೆ ಆಶ್ರಯೀಭೂತವಾದ

---

14) ನಿರ್ವಿಶೇಷತ್ವಸ್ಯ ಬ್ರಹ್ಮಣ್ಯಸಿದ್ಧತ್ವಾನ್ನಿರ್ವಿಶೇಷತ್ವಾದಿತಿ ಕಥಮಾಚಾರ್ಯೇಣೋಕ್ತಮಿತ್ಯಾಶಂಕ್ಯ ತದ್ವ್ಯಾಖ್ಯಾತಂ ಟೀಕಾಕೃತಾ ॥ ನಿರ್ವಿಶೇಷತ್ವಾಂಗೀಕಾರಾದಿತಿ ॥ ಪರೇಣ ನಿರ್ಧರ್ಮಕತ್ವಸ್ಯ ಅಂಗೀಕಾರಾದೇವ ಭೇದಪ್ರತಿನಿಧಿರೂಪವಿಶೇಷಾಶ್ರಯಭೂತಧರ್ಮರಾಹಿತ್ಯ-ಸ್ಯಾಪ್ಯಂಗೀಕಾರಾದಿತ್ಯರ್ಥಃ । (ಮಂದಾರಮಂಜರೀ)

ಧರ್ಮಿಯಲ್ಲಿ ಇರುವ ಧರ್ಮ) ಎಂಬುದಾಗಿ ಅಂಗೀಕರಿಸಲ್ಪಡುತ್ತದೆ. ಹೊರತು ಘಟದಿಂದ ಅತ್ಯಂತಾಭಿನ್ನ (ನಿರ್ವಿಶೇಷಾಭಿನ್ನ) ಎಂದು ಅಂಗೀಕರಿಸಲ್ಪಡುವುದಿಲ್ಲ. ಹೀಗಾಗಿ ಘಟವು ಉಪಲಬ್ಧವಾದರೂ ಘಟವಿಶೇಷವಾದ ರೂಪವು ಉಪಲಬ್ಧವಾಗಿಲ್ಲ ಎಂದು ಹೇಳಬಹುದು.

ಐಕ್ಯದ ವಿಷಯದಲ್ಲಿ ಹಾಗೆ ಹೇಳಲು ಬರುವುದಿಲ್ಲ. ಐಕ್ಯವು ಆತ್ಮನಿಂದ ಅಭಿನ್ನವಾದರೂ ವಿಶೇಷಾಶ್ರಯನಾದ ಆತ್ಮನ ಧರ್ಮ ಎಂದು ಅಂಗೀಕರಿಸಿದ್ದರೆ ''ಆತ್ಮನು ಸಿದ್ಧನಾಗಿದ್ದರೂ ಐಕ್ಯವು ಸಿದ್ಧವಾಗಿಲ್ಲ'' ''ಆತ್ಮನು ವೃತ್ತಿಗೆ ಅವಿಷಯನಾದರೂ ಐಕ್ಯವು ವೃತ್ತಿಗೆ ವಿಷಯವಾಗುಬಹುದು'' ಎಂದು ಹೇಳಬಹುದಾಗಿತ್ತು. ಆದರೆ ಆತ್ಮಸ್ವರೂಪವನ್ನು ನೀವು ನಿರ್ವಿಶೇಷ ಎಂದು ಅಂಗೀಕರಿಸಿದ್ದರಿಂದ, ಐಕ್ಯವು ಆತ್ಮನಿಂದ ಅಭಿನ್ನವಾದರೂ ಆತ್ಮನ ವಿಶೇಷ ಎಂದು ಹೇಳಲು ಬರುವುದಿಲ್ಲ. ಹಾಗಾಗಿ ಆತ್ಮನು ಸಿದ್ಧನಾದ್ದರಿಂದ ಅವನಿಂದ ನಿರ್ವಿಶೇಷಾಭಿನ್ನವಾದ ಐಕ್ಯವೂ ಸಿದ್ಧವೇ ಆಗುತ್ತದೆ. ಅಂತಹ ಸಿದ್ಧವಾದ ಐಕ್ಯವನ್ನೇ ಪ್ರತಿಪಾದನೆ ಮಾಡುವ ಶಾಸ್ತ್ರಕ್ಕೆ ಸಿದ್ಧಸಾಧನತಾ ಬಂದೇ ಬರುತ್ತದೆ. ಮತ್ತು ಆತ್ಮನು ವೃತ್ತಿಗೆ ಅವಿಷಯನಾದ್ದರಿಂದ ಅವನಿಂದ ನಿರ್ವಿಶೇಷಾಭಿನ್ನವಾದ ಐಕ್ಯವೂ ವೃತ್ತಿಗೆ ಅವಿಷಯವೇ ಆಗುತ್ತದೆ. ಅಂತಹ ಅವೇದ್ಯವಾದ ಐಕ್ಯವನ್ನು ಪ್ರತಿಪಾದನೆ ಮಾಡುವುದಾದರೆ ಶಾಸ್ತ್ರಕ್ಕೆ ಅಪ್ರತಿಪಾದಕತ್ವದೋಷವೂ ಬಂದೇ ಬರುತ್ತದೆ.

**ಅವತಾರಿಕೆ :-** ಸಿದ್ಧಸಾಧನತ್ವಾದಿ ದೋಷಗಳನ್ನು ಮತ್ತೊಂದು ರೀತಿಯಿಂದ ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ -

**ಟೀಕಾ :- ಅಥಾಪಿ ಸ್ಯಾತ್ । ಭೇವೇದಿದಂ ಶಾಸ್ತ್ರಸ್ಯ ಸಿದ್ಧಸಾಧನತ್ವಾದಿ ಯದಿ ಶಾಸ್ತ್ರಂ [15]ಸಾಕ್ಷಾದದ್ವೈತಂ ಪ್ರತಿಪಾದಯತೀತಿ ಬ್ರೂಮಃ । ನ ಚೈವಮ್ । ಕಿಂ ನಾಮ ? ಆವರಣಭೂತಾಜ್ಞಾನಮಾತ್ರಂ ನಿವರ್ತಯತೀತಿ । ನಿವೃತ್ತೇ ತ್ವಾವರಣೇ ಅದ್ವೈತಂ ಸ್ವತ ಏವ ಸಿದ್ಧಮ್ । ತದುಕ್ತಂ - ''[16]ಸಿದ್ಧಂ ತು ನಿವರ್ತಕತ್ವಾತ್'' ಇತಿ । ತತ್ರಾಹ -**

---

15) ನನು ಕಥಮೇತತ್ ? ಶಾಸ್ತ್ರಸ್ಯ ಸಾಕ್ಷಾದೈಕ್ಯಾಪ್ರತಿಪಾದಕತ್ವೇ ತಜ್‌ಜ್ಞಾನಾಸಂಭವೇನ ತದಾವರಣಭೂತಾಜ್ಞಾನನಿವರ್ತಕತ್ವಮೇವ ನ ಸ್ಯಾತ್ । ಜ್ಞಾನಸ್ಯೈವಾಜ್ಞಾನನಿವರ್ತಕ-ತ್ವಾದಿತಿ ಚೇನ್ನ । ಸಾಕ್ಷಾತ್ ಇತ್ಯಸ್ಯ ಮುಖ್ಯತ ಇತ್ಯರ್ಥಕತ್ವಾತ್ । ತಥಾ ಚ ನ ಶಾಸ್ತ್ರಸ್ಯೈಕ್ಯಪ್ರತಿಪಾದನ ಏವ ಮುಖ್ಯತಸ್ತಾತ್ಪರ್ಯಮ್ । ಕಿನ್ನಾಮ ? ತತ್ಪ್ರತಿಪಾದನ-ದ್ವಾರಾಽಜ್ಞಾನನಿವರ್ತನ ಏವೇತಿ ನ ಕಶ್ಚಿದ್ದೋಷಃ ॥ (ಶ್ರೀನಿ)

**- ಮಾಯಾವಾದಖಂಡನ -**

ಸಿದ್ಧತ್ವಾತ್ಸ್ವರೂಪಸ್ಯ ವಿಶೇಷಾಭಾವಾಚ್ಚ ನಾಜ್ಞಾನಂ ಕಸ್ಯಚಿದಾವರಕಮ್ ।

**ಸ್ಯಾದೇವಂ ಶಾಸ್ತ್ರಸ್ಯ ಸಿದ್ಧಸಾಧನತಾಪರಿಹಾರಃ । ಯದಿ ಪರಮತೇ ಅಜ್ಞಾನಮಾವರಣಂ ಸಂಭವೇತ್ । ನ ಚೈತತ್ಸಂಭವತಿ । ಆವರಣಂ ಹ್ಯಾವ್ರಿಯಮಾಣೇನ ವ್ಯಾಪ್ತಮ್ । ನ ಚಾಜ್ಞಾನಸ್ಯ ತದಸ್ತಿ । ತಥಾ ಹಿ - ಕಿಮಜ್ಞಾನಮಾತ್ಮಸ್ವರೂಪಸ್ಯಾವರಣಂ ಸ್ಯಾತ್ ? ಉತ ತದ್ವಿಶೇಷಸ್ಯ ? ನಾದ್ಯಃ । ತಸ್ಯ ಸ್ವಪ್ರಕಾಶತ್ವೇನ ನಿತ್ಯಸಿದ್ಧತ್ವಾತ್ । ನ ದ್ವಿತೀಯಃ । ತದಭಾವಾತ್ । ತಥಾ ಚ ವ್ಯಾಪಕಾಭಾವಾದ್ವ್ಯಾಪ್ಯಮಾವರಣಮಪಿ ನ ಸಂಭವತೀತಿ ನ ತನ್ನಿವರ್ತಕತ್ವೇನ ಶಾಸ್ತ್ರಸ್ಯಾಸಿದ್ಧಸಾಧನತ್ವಂ ಭವತೀತಿ ।**

**ಅನುವಾದ :-** ಆದರೂ ಸಹ ಶಾಸ್ತ್ರಕ್ಕೆ ಸಿದ್ಧಸಾಧನತ್ವಾದಿ ದೋಷಗಳು ಬರುತ್ತಿತ್ತು. ಯಾವಾಗ ? ಒಂದುವೇಳೆ ಶಾಸ್ತ್ರವು ಸಾಕ್ಷಾತ್ತಾಗಿ ಅದ್ವೈತವನ್ನು ಪ್ರತಿಪಾದಿಸುತ್ತದೆ ಎಂದು ಹೇಳುತ್ತಿದ್ದರೆ. ಆದರೆ ನಾವು ಹಾಗೆ ಹೇಳುವುದಿಲ್ಲ. ಕಿಂತು ಏನು ಹೇಳುತ್ತೇವೆ ? ಶಾಸ್ತ್ರವು (ಅದ್ವೈತಕ್ಕೆ) ಆವರಣಭೂತವಾದ ಅಜ್ಞಾನವನ್ನು ಮಾತ್ರ ನಿವಾರಿಸುತ್ತದೆ ಎಂದು ಹೇಳುತ್ತೇವೆ. ಆವರಣವು ನಿವೃತ್ತವಾಗುತ್ತಿರಲು ಅದ್ವೈತವು ಸ್ವತ ಏವ ಸಿದ್ಧವಾಗುತ್ತದೆ. ವಿವರಣಕಾರರು ಇದನ್ನೇ ಹೇಳಿದ್ದಾರೆ -

**''ಸಿದ್ಧಂ ತು ನಿವರ್ತಕತ್ವಾತ್''**

''ಐಕ್ಯವು ಸ್ವಪ್ರಕಾಶಆತ್ಮಸ್ವರೂಪವಾದ್ದರಿಂದ ಸದಾ ಪ್ರಕಾಶಮಾನವಾದರೂ ಸಹ ಶಾಸ್ತ್ರಕ್ಕೆ ಆರಂಭಣೀಯತ್ವವು ಸಿದ್ಧವೇ. ಯಾಕೆ ? ಶಾಸ್ತ್ರವು ಅಜ್ಞಾನಮಾತ್ರ-

---

16) ಅ) ಐಕ್ಯಸ್ಯ ಸ್ವಪ್ರಕಾಶಾತ್ಮಸ್ವರೂಪತ್ವೇನ ಸದಾ ಪ್ರಕಾಶಮಾನತ್ವೇಽಪಿ ಶಾಸ್ತ್ರಸ್ಯಾರಂಭಣೀಯತ್ವಂ ಸಿದ್ಧಮೇವ । ಶಾಸ್ತ್ರಸ್ಯಾಜ್ಞಾನಮಾತ್ರನಿವರ್ತಕತ್ವಾತ್ ಇತ್ಯರ್ಥಃ । (ಮಂದಾರಮಂಜರೀ)

ಆ) ಶಾಸ್ತ್ರಸ್ಯ ಸಾರ್ಥಕ್ಯಂ ಸಿದ್ಧಮ್ । ಕುತಃ ? ನಿವರ್ತಕತ್ವಾತ್ ಆವರಣಭೂತಾಜ್ಞಾನ-ನಿವರ್ತಕತ್ವಾದಿತ್ಯರ್ಥಃ । (ಶ್ರೀನಿವಾಸತೀರ್ಥೀಯಾ)

ಇ) ಶಾಸ್ತ್ರಸ್ಯಾರಂಭಣೀಯತ್ವಂ ಸಿದ್ಧಮ್ । ಅಜ್ಞಾನನಿವರ್ತಕತ್ವೇನ ಪ್ರಯೋಜನವತ್ವಾತ್, ತದ್ದ್ವಾರಾಽದ್ವೈತಸಿದ್ಧ್ಯುಪಯೋಗಿತ್ವೇನ ಸವಿಷಯತ್ವಾಚ್ಚೇತಿ ಭಾವಃ । (ಮಾಯಾವಾದಪರಶುಃ)

ನಿವರ್ತಕವಾದ್ದರಿಂದ'' ಎಂದು. ಆದ್ದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತ್ವಾದಿ ದೋಷಗಳು ಬರುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದಕ್ಕಾಗಿ ಆಚಾರ್ಯರು ಹೇಳಿದರು -

**ಸಿದ್ಧತ್ವಾತ್ಸ್ವರೂಪಸ್ಯ ವಿಶೇಷಾಭಾವಾಚ್ಚ ನಾಜ್ಞಾನಂ ಕಸ್ಯಚಿದಾವರಕಮ್।** (ಮೂಲ)

ಆತ್ಮಸ್ವರೂಪವು ಸ್ವಪ್ರಕಾಶವಾಗಿ ನಿತ್ಯಸಿದ್ಧವಾದ್ದರಿಂದ, ಮತ್ತು ಆತ್ಮನಿಗೆ ಯಾವ ವಿಶೇಷವನ್ನೂ ಒಪ್ಪಿಲ್ಲವಾದ್ದರಿಂದ ಅಜ್ಞಾನವು ಯಾವುದಕ್ಕೂ ಆವರಕವಾಗುವುದಿಲ್ಲ ಎಂದು ಮೂಲಾರ್ಥ.

ಈ ರೀತಿಯಾಗಿ ಶಾಸ್ತ್ರಕ್ಕೆ ಸಿದ್ಧಸಾಧನತಾಪರಿಹಾರವು ಕೂಡುತ್ತಿತ್ತು. ಯಾವಾಗ ? ಒಂದುವೇಳೆ ಪರಮತದಲ್ಲಿ ಅಜ್ಞಾನವು ಆವರಣವಾಗುತ್ತಿದ್ದರೆ. ಆದರೆ ಅಜ್ಞಾನವು ಆವರಣವಾಗಲು ಸಾಧ್ಯವಿಲ್ಲ. ಯಾಕೆಂದರೆ - ಆವರಣವು ಆವ್ರಿಯಮಾಣವಾದ ವಸ್ತುವಿನಿಂದ ವ್ಯಾಪ್ತವಾಗಿದೆ. (ಆವ್ರಿಯಮಾಣವಾದ ವಸ್ತು ಇದ್ದರೆ ಮಾತ್ರ ಆವರಣ ಕೂಡುತ್ತದೆ ಎಂದು ಭಾವ.) ಆದರೆ ಅಜ್ಞಾನಕ್ಕೆ ಆವ್ರಿಯಮಾಣವಾದ ವಸ್ತು ಯಾವುದೂ ಇಲ್ಲ.

ಅದು ಹೇಗೆಂದರೆ - ಅಜ್ಞಾನವು ಆತ್ಮಸ್ವರೂಪಕ್ಕೆ ಆವರಣವಾಗುತ್ತದೆಯೋ ? ಅಥವಾ ಆತ್ಮನ ವಿಶೇಷಕ್ಕೆ ಆರವಣವಾಗುತ್ತದೆಯೋ ?

ಆತ್ಮಸ್ವರೂಪಕ್ಕೆ ಆವರಣವಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಕಾರಣ - ಆತ್ಮಸ್ವರೂಪವು ಸ್ವಪ್ರಕಾಶವಾಗಿ ನಿತ್ಯಸಿದ್ಧವಾದ್ದರಿಂದ ಅಜ್ಞಾನವು ಆತ್ಮಸ್ವರೂಪಕ್ಕೆ ಆವರಣವಾಗುವುದಿಲ್ಲ. ಇನ್ನು ಆತ್ಮನ ವಿಶೇಷಕ್ಕೆ ಆವರಣವಾಗುತ್ತದೆ ಎಂದು ಹೇಳುವುದೂ ಸರಿಯಲ್ಲ. ಕಾರಣ - ಆತ್ಮನಿಗೆ ಯಾವ ವಿಶೇಷವನ್ನೂ ಒಪ್ಪಿಲ್ಲವಾದ್ದರಿಂದ.

ಆದ್ದರಿಂದ ವ್ಯಾಪಕವಾದ ಆವ್ರಿಯಮಾಣವಾದ ವಸ್ತು ಇಲ್ಲವಾದ್ದರಿಂದ ವ್ಯಾಪ್ಯವಾದ ಆವರಣವೂ ಸಂಭವಿಸುವುದಿಲ್ಲ. ಹೀಗಾಗಿ ಪರಮತದಲ್ಲಿ ಅಜ್ಞಾನವು ಆವರಣವಾಗಲು ಸಾಧ್ಯವಿಲ್ಲವಾದ್ದರಿಂದ ''ಆವರಣಭೂತವಾದ ಅಜ್ಞಾನಕ್ಕೆ ನಿವರ್ತಕವಾಗುವುದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತಾ ಬರುವುದಿಲ್ಲ'' ಎಂಬುದಾಗಿ ಸಿದ್ಧಸಾಧನತಾದೋಷವನ್ನು ಪರಿಹಾರ ಮಾಡಿಕೊಳ್ಳಲು ಸಾಧ್ಯವಿಲ್ಲ. ಶಾಸ್ತ್ರಕ್ಕೆ ಸಿದ್ಧಸಾಧನತಾ ದೋಷ ಬಂದೇ ಬರುತ್ತದೆ ಎಂದು ಭಾವ.

-: ವಿಶೇಷ ವಿಚಾರಗಳು :-

ವಿ.ವಿ. 1) -

**ಟೀಕಾ :- ಯದಿ ಶಾಸ್ತ್ರಂ ಸಾಕ್ಷಾದದ್ವೈತಂ ಪ್ರತಿಪಾದಯತೀತಿ ಬ್ರೂಮಃ । ನ ಚೈವಮ್ । ಕಿನ್ನಾಮ ? ಆವರಣಭೂತಾಜ್ಞಾನಮಾತ್ರಂ ನಿವರ್ತಯತೀತಿ ।**

**ಶ್ರೀನಿವಾಸತೀರ್ಥೀಯಟಿಪ್ಪಣೀವಿಚಾರ :-**

ಇದು ಹೇಗೆ ಸಾಧ್ಯ ? (''ಶಾಸ್ತ್ರವು ಸಾಕ್ಷಾತ್ತಾಗಿ ಅದ್ವೈತಪ್ರತಿಪಾದಕ ಎಂದು ನಾವು ಹೇಳುವುದಿಲ್ಲ'' ಎಂಬುದಾಗಿ ಹೇಳುವುದು ಹೇಗೆ ಸಮಂಜಸವಾಗುತ್ತದೆ ?) ಶಾಸ್ತ್ರವು ಸಾಕ್ಷಾತ್ ಐಕ್ಯಪ್ರತಿಪಾದಕ ಅಲ್ಲ ಎಂದಾದರೆ, ಶಾಸ್ತ್ರದಿಂದ ಐಕ್ಯಜ್ಞಾನ ಆಗುವುದಿಲ್ಲ ಎಂದಾಯಿತು. ಜ್ಞಾನವೇ ಅಜ್ಞಾನನಿವರ್ತಕವಾಗುವ ನಿಯಮವಿರುವುದರಿಂದ ಪ್ರಕೃತ ಐಕ್ಯಜ್ಞಾನವೇ ಆಗದಿದ್ದರೆ ಐಕ್ಯಾವರಣಭೂತಾಜ್ಞಾನನಿವರ್ತಕತ್ವವೇ ಕೂಡುವುದಿಲ್ಲವಲ್ಲ? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಕಾರಣ - ಸಾಕ್ಷಾತ್ ಎಂಬುದಕ್ಕೆ ಮುಖ್ಯತಃ ಎಂದು ಅರ್ಥ ವಿವಕ್ಷಿಸಲಾಗಿದೆ. ಹಾಗಾಗಿ ಶಾಸ್ತ್ರಕ್ಕೆ ಐಕ್ಯಪ್ರತಿಪಾದನೆಯಲ್ಲಿಯೇ ಮುಖ್ಯವಾಗಿ ತಾತ್ಪರ್ಯ ಅಲ್ಲ. ಕಿಂತು ಐಕ್ಯಪ್ರತಿಪಾದನದ್ವಾರಾ ಅಜ್ಞಾನನಿವರ್ತನೆಯಲ್ಲಿಯೇ ಮುಖ್ಯವಾಗಿ ತಾತ್ಪರ್ಯ ಇದೆ ಎಂದು ನಮ್ಮ ಮಾತಿನ ಅಭಿಪ್ರಾಯವಾದ್ದರಿಂದ ಯಾವ ದೋಷಕ್ಕೂ ಅವಕಾಶವಿಲ್ಲ.

ವಿ.ವಿ. 2) -

**ಟೀಕಾ :- ಕಿಮಜ್ಞಾನಮಾತ್ಮಸ್ವರೂಪಸ್ಯಾವರಣಂ ಸ್ಯಾತ್ ? ಉತ ತದ್ವಿಶೇಷಸ್ಯ ? ನಾದ್ಯಃ । ತಸ್ಯ ಸ್ವಪ್ರಕಾಶತ್ವೇನ ನಿತ್ಯಸಿದ್ಧತ್ವಾತ್ । ನ ದ್ವಿತೀಯಃ । ತದಭಾವಾತ್ ।**

**ಮಾಯಾವಾದಪರಶು ಟಿಪ್ಪಣೀವಿಚಾರ :-**

ಅಜ್ಞಾನವು ನಿರ್ವಿಶೇಷಾಭಿನ್ನವಾದ ಐಕ್ಯಕ್ಕೆ ಆವರಣವಾಗುತ್ತದೆಯೋ ? ಅಥವಾ ಸವಿಶೇಷಾಭಿನ್ನವಾದ ಆತ್ಮಸ್ವರೂಪವಾದ ಐಕ್ಯಕ್ಕೆ ಆವರಣವಾಗುತ್ತದೆಯೋ ? ಎಂದು ವಿಕಲ್ಪದ ಅಭಿಪ್ರಾಯ. ಹೀಗೆ ಅಭಿಪ್ರಾಯ ಇರುವುದರಿಂದ ''ಐಕ್ಯಕ್ಕೆ ಅಜ್ಞಾನವು ಆವರಣ ಎಂದು ಹೇಳಿದಾಗ ಅಜ್ಞಾನವು ಆತ್ಮಸ್ವರೂಪಕ್ಕೆ ಆವರಣವಾಗುತ್ತದೆಯೋ ? ಅಥವಾ ಆತ್ಮನ ವಿಶೇಷಕ್ಕೆ ಆವರಣವಾಗುತ್ತದೆಯೋ ? ಎಂಬುದಾಗಿ ವಿಕಲ್ಪ ಮಾಡುವುದು ಯುಕ್ತವಲ್ಲ'' ಎಂಬ ಆಕ್ಷೇಪ ನಿರಾಕರಿಸಿದಂತಾಗುತ್ತದೆ.

ನಿರ್ವಿಶೇಷಾಭಿನ್ನವಾದ ಐಕ್ಯಕ್ಕೆ ಆವರಣ ಎಂಬ ಮೊದಲನೇ ಪಕ್ಷ ಸರಿಯಲ್ಲ. ಕಾರಣ ಆತ್ಮನು ಸ್ವಪ್ರಕಾಶನಾದ್ದರಿಂದ ಅಂತಹ ಸ್ವಪ್ರಕಾಶನಾದ ಆತ್ಮನಿಂದ ನಿರ್ವಿಶೇಷಾಭಿನ್ನವಾದ ಐಕ್ಯವೂ ಸದಾ ಸಿದ್ಧವಾದ್ದರಿಂದ 'ಅಜ್ಞಾನವು ಆವರಕ 'ಎಂದು ಹೇಳಲು ಶಕ್ಯವಿಲ್ಲ ಎಂದು ಭಾವ.

ಇನ್ನು ಸವಿಶೇಷಾಭಿನ್ನವಾದ ಐಕ್ಯಕ್ಕೆ ಆವರಣ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಕಾರಣ - ಆತ್ಮನಲ್ಲಿ ಯಾವ ವಿಶೇಷವನ್ನೂ ಒಪ್ಪದ ಕಾರಣ, ಆತ್ಮನಿಂದ ಸವಿಶೇಷಾಭಿನ್ನವಾದ ವಸ್ತುವೇ ಇಲ್ಲವಾದ್ದರಿಂದ ಎನ್ನುವುದು ವಿಕಲ್ಪ-ನಿರಾಕರಣೆಗಳ ಅಭಿಪ್ರಾಯ.

**ಅವತಾರಿಕೆ :-** ''ಶಾಸ್ತ್ರಕ್ಕೆ ಸಿದ್ಧಸಾಧನತಾದೋಷ ಬಂದೇ ಬರುತ್ತದೆ'' ಎಂಬುದಾಗಿ ಹೇಳಿದಾಗ ಅದರ ಮೇಲೆ ಶಂಕೆ ಮಾಡಿಕೊಂಡು ಸಮಾಧಾನ ಹೇಳುತ್ತಾರೆ-

**ಟೀಕಾ :- ಅಸ್ತು ತರ್ಹಿ ಸಿದ್ಧಸಾಧನತಾ ಶಾಸ್ತ್ರಸ್ಯ । [17]ಕೋ ದೋಷಃ ? ಇತಿ ಚೇತ್ । ಪರಾರ್ಥತ್ವಾಚ್ಛಾಸ್ತ್ರಸ್ಯ ಪರಿಸಿದ್ಧಬೋಧನೇ ಅನುಪಾದೇಯತ್ವಂ ಸ್ಯಾದಿತ್ಯೇಕಃ[18] । ಅಪರಂ ಚಾಹ -**

**- ಮಾಯಾವಾದಖಂಡನ -**

**'ಅನಧಿಗತಾರ್ಥಗಂತೃ ಪ್ರಮಾಣಮ್' ಇತಿ ಚ ತನ್ಮತಮ್ ।**

**ಗಂತೃಶಬ್ದೇನಾವಗತಿಸಾಧನಮುಚ್ಯತೇ । ಅನಧಿಗತೇತಿ [19]ಸ್ಮೃತ್ಯಾದಿವ್ಯುದಾಸಾರ್ಥಮ್ । [20]ಶುಕ್ತಿರಜತಾದಿಜ್ಞಾನನಿರಾಸಾಯಾರ್ಥ ಗ್ರಹಣಮ್ । ಅರ್ಥಸ್ಯ ಚ ಯಥಾವಸ್ಥಿತಸ್ಯ ವಿವಕ್ಷಿತತ್ವಾತ್ । ಅರ್ಥಸ್ಯ ಫಲಸ್ಯ**

17) ಕೋ ದೋಷ ಇತಿ ।। ಧಾರಾವಾಹಿಕದ್ವಿತೀಯಾದಿಜ್ಞಾನವತ್ ಸಿದ್ಧಬೋಧಕತ್ವೇಽಪಿ ಪ್ರಾಮಾಣ್ಯೋಪಪತ್ತೇಃ ಅಪ್ರಾಮಾಣ್ಯಪ್ರಸಂಗರೂಪೋ ದೋಷೋ ನಾಸ್ತೀತ್ಯರ್ಥಃ । (ಮಂದಾರಮಂಜರೀ)

18) ಏಕೋ ದೋಷಃ ।

19) ಸ್ಮೃತೇಃ ಆದಿಃ ಕಾರಣಂ ಸ್ಮೃತ್ಯಾದಿಃ ಸಂಸ್ಕಾರ ಇತ್ಯರ್ಥಃ । (ಶ್ರೀನಿ)

20) ಶುಕ್ತಿರಜತಾದಿಃ ಜ್ಞಾಯತೇ ಅನೇನೇತಿ ವ್ಯುತ್ಪತ್ತ್ಯಾ ಶುಕ್ತಿರಜತಾದಿಜ್ಞಾನಶಬ್ದೇನ ದುಷ್ಟೇಂದ್ರಿಯಂ ಗ್ರಾಹ್ಯಮ್ । (ಶ್ರೀನಿವಾಸತೀರ್ಥೀಯಾ)

**ಚ ನಿವೃತ್ಯರ್ಥಂ ಗಂತೃಪದಮ್ । ತಸ್ಯ ಚ ಸಾಧನಪರತ್ವಾನ್ನ ಕರ್ತರ್ಯತಿ-ಪ್ರಸಂಗಃ । ಏತದ್ಭಾಟ್ಟಾನಾಂ ಪ್ರಮಾಣಲಕ್ಷಣಮ್ । 'ವ್ಯವಹಾರೇ ಭಟ್ಟನಯಃ' ಇತಿ ಮಾಯಾವಾದಿಭಿರಂಗೀಕಾರಾತ್ ತನ್ಮತಮಿತ್ಯುಕ್ತಮ್ । ಯದಿ ಶಾಸ್ತ್ರಮಧಿ ಗತಮೇವಾರ್ಥಮವಗಮಯೇತ್ತದಾ ಪ್ರಮಾಣಲಕ್ಷಣಾಭಾವಾದಪ್ರಮಾಣಂ ಪ್ರಸಜ್ಯೇತೇತಿ ।**

**ಅನುವಾದ :-** ಶಾಸ್ತ್ರಕ್ಕೆ ಸಿದ್ಧಸಾಧನತಾದೋಷ ಬಂದೇ ಬರುತ್ತದೆ ಎನ್ನುವುದಾದರೆ, ಹಾಗಾದರೆ ಶಾಸ್ತ್ರಕ್ಕೆ ಸಿದ್ಧಸಾಧನತಾದೋಷ ಬರಲಿ. ಏನು ದೋಷ ? (ಧಾರಾವಾಹಿಕದ್ವಿತೀಯಾದಿಜ್ಞಾನಗಳಂತೆ ಸಿದ್ಧಾರ್ಥಬೋಧಕತ್ವ ಇದ್ದರೂ ಸಹ ಪ್ರಾಮಾಣ್ಯವು ಉಪಪನ್ನವಾಗುವುದರಿಂದ ಅಪ್ರಾಮಾಣ್ಯಪ್ರಸಂಗರೂಪವಾದ ದೋಷ ಬರುವುದಿಲ್ಲವಲ್ಲ ?) ಎಂದು ಶಂಕಿಸಿದರೆ, ಶಾಸ್ತ್ರವು ಪರಾರ್ಥವಾದ್ದರಿಂದ (ಪರಪ್ರವೃತ್ತಿ-ನಿವೃತ್ತಿಗಳಿಗೆ ಉಪಯೋಗಿಯಾದ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ) ಪರರಿಗೆ ಸಿದ್ಧವಾದ ಅರ್ಥವನ್ನೇ ಪ್ರತಿಪಾದನೆ ಮಾಡಿದರೆ ಶಾಸ್ತ್ರಕ್ಕೆ ಅನುಪಾದೇಯತ್ವ ಬರಬೇಕಾಗುತ್ತದೆ ಎನ್ನುವುದು ಒಂದು ದೋಷ.

ಜೊತೆಗೆ ಮತ್ತೊಂದು ದೋಷವನ್ನೂ ಹೇಳುತ್ತಾರೆ :-

**'ಅನಧಿಗತಾರ್ಥಗಂತೃ ಪ್ರಮಾಣಮ್' ಇತಿ ಚ ತನ್ಮತಮ್ ।** (ಮೂಲ)

'ತಿಳಿಯದೇ ಇದ್ದ ವಸ್ತುವನ್ನು ತಿಳಿಸುವ ಜ್ಞಾನಕ್ಕೆ ಯಾವುದು ಸಾಧನವೋ ಅದು ಪ್ರಮಾಣ' ಎಂಬುವುದು ಮಾಯಾವಾದಿಗಳ ಮತವಾಗಿದೆ ಎಂದು ಮೂಲಾರ್ಥ.

'ಅನಾಧಿಗತಾರ್ಥಗಂತೃ ಪ್ರಮಾಣಂ' ಎನ್ನುವಲ್ಲಿ ಗಂತೃಶಬ್ದವು ಅವಗತಿಕರ್ತೃ ವಾಚಕವಾದ್ದರಿಂದ ಲಕ್ಷ್ಯವಾದ ಇಂದ್ರಿಯಾದಿಕರಣಗಳಲ್ಲಿ ಅವಗತಿಕರ್ತೃತ್ವ ಇಲ್ಲವಾದ್ದರಿಂದ ಅಸಂಭವ ಬರುತ್ತದೆಯಲ್ಲವೇ ? ಎಂದರೆ, ಅದು ಸರಿಯಲ್ಲ. ಕಾರಣ ಪ್ರಕೃತದಲ್ಲಿ ಗಂತೃಶಬ್ದಕ್ಕೆ ಅವಗತಿಕರಣ (ಅವಗತಿಸಾಧನ) ಎಂದು ಅರ್ಥ ವಿವಕ್ಷಿಸಲಾಗಿದೆ. ಇಂದ್ರಿಯಾದಿಗಳಲ್ಲಿ ಅವಗತಿಕರ್ತೃತ್ವ ಇಲ್ಲದಿದ್ದರೂ ಅವಗತಿಸಾಧನತ್ವ ಇರುವುದರಿಂದ ಅಸಂಭವಕ್ಕೆ ಅವಕಾಶವಿಲ್ಲ.

ಸ್ಮೃತಿಗೆ ಕಾರಣವಾದ ಸಂಸ್ಕಾರದಲ್ಲಿ ಬರುವ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ಅನಧಿ ಗತ ಎಂಬ ಪದವು ಆವಶ್ಯಕ. ಶುಕ್ತಿರಜತಾದಿಜ್ಞಾನಸಾಧನವಾದ ದುಷ್ಟೇಂದ್ರಿಯದಲ್ಲಿ ಬರುವ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ಅರ್ಥಪದವು ಆವಶ್ಯಕ. ಅರ್ಥ ಎಂದರೆ

ಯಥಾವಸ್ಥಿತವಾದ ಅರ್ಥವನ್ನು ವಿವಕ್ಷಿಸಿದ್ದರಿಂದ ದುಷ್ಟೇಂದ್ರಿಯದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ಅರ್ಥದಲ್ಲಿ ಹಾಗೂ ಜ್ಞಾನದಲ್ಲಿ ಬರುವ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ಗಂತೃಪದವು ಆವಶ್ಯಕ. ಆ ಗಂತೃಪದವು ಸಾಧನಪರವಾದ್ದರಿಂದ (ಗಂತೃಪದಕ್ಕೆ ಅವಗತಿಸಾಧನ ಎಂದು ಅರ್ಥವಾದ್ದರಿಂದ) ಕ್ರರ್ತೃವಿನಲ್ಲಿ ಅತಿವ್ಯಾಪ್ತಿ (ಅತಿಪ್ರಸಂಗ) ಬರುವುದಿಲ್ಲ.

(ದಳಕೃತ್ಯದ ವಿಸ್ತಾರವನ್ನು **'ವಿವರಣೆ'**ಯಲ್ಲಿ ಕಾಣಬಹುದಾಗಿದೆ.)

'ಅನಧಿಗತಾರ್ಥಗಂತೃ ಪ್ರಮಾಣಂ' ಎಂಬ ಈ ಲಕ್ಷಣವು ಭಾಟ್ಟರ ಲಕ್ಷಣವಾಗಿದೆಯಲ್ಲವೇ ? ಅಂದಮೇಲೆ 'ತನ್ಮತಮ್' ಎಂದು ಆಚಾರ್ಯರು ಹೇಗೆ ಹೇಳಿದರು ? ಎಂದರೆ, ಸತ್ಯ. ಇದು ಭಾಟ್ಟರ ಲಕ್ಷಣವೇ. ಆದರೂ 'ವ್ಯವಹಾರೇ ಭಟ್ಟನಯಃ' ಎಂಬುದಾಗಿ ಮಾಯಾವಾದಿಗಳು ಅಂಗೀಕರಿಸಿದ್ದರಿಂದ, ಭಾಟ್ಟರ ಈ ಲಕ್ಷಣವನ್ನು ಮಾಯಾವಾದಿಗಳೂ ಅಂಗೀಕರಿಸಿರುವುದರಿಂದ 'ತನ್ಮತಮ್' ಎಂಬುದಾಗಿ ಆಚಾರ್ಯರು ಹೇಳಿದ್ದು ಯುಕ್ತವೇ.

ಪ್ರಮಾಣದ ಲಕ್ಷಣವನ್ನು ಹೇಳಿದಿರಿ. ಮುಂದೇನು ? ಎಂದರೆ, ಒಂದುವೇಳೆ ಶಾಸ್ತ್ರವು ಅಧಿಗತವಾದ (ಸಿದ್ಧವಾದ) ಅರ್ಥವನ್ನೇ (ಐಕ್ಯವನ್ನೇ) ತಿಳಿಸುವುದಾದರೆ (ಶಾಸ್ತ್ರಕ್ಕೆ ಸಿದ್ಧಸಾಧನತಾ ಬರಲಿ ಎನ್ನುವುದಾದರೆ) ಅನಧಿಗತಾರ್ಥಗಂತೃತ್ವ ಎಂಬ ಪ್ರಮಾಣದ ಲಕ್ಷಣ ಬರುವುದಿಲ್ಲವಾದ್ದರಿಂದ ಶಾಸ್ತ್ರವು ಅಪ್ರಮಾಣವಾಗಬೇಕಾಗುತ್ತದೆ ಎಂದು ಅಭಿಪ್ರಾಯ.

**ವಿವರಣೆ :-** ಪ್ರಕೃತದಲ್ಲಿ ಗಂತೃಶಬ್ದಕ್ಕೆ ಅವಗತಿಕರಣ ಎಂದು ವಿವಕ್ಷಿಸಿ, ಅರ್ಥ ಶಬ್ದದಿಂದ ತಥಾಭೂತ(ಯಥಾವಸ್ಥಿತ)ವಾದ ಅರ್ಥವನ್ನು ವಿವಕ್ಷಿಸಿದ್ದರಿಂದ ''ಅನಧಿಗತತಥಾಭೂತಾರ್ಥಾವಗತಿಕರಣಂ ಪ್ರಮಾಣಂ'' ಎಂಬುದಾಗಿ ಪ್ರಮಾಣದ ಲಕ್ಷಣವನ್ನು ಹೇಳಿದಂತಾಗುತ್ತದೆ. ಇಲ್ಲಿ ಕ್ರಮವಾಗಿ ಪದಗಳಿಗೆ ಕೃತ್ಯವನ್ನು ತೋರಿಸುತ್ತಾರೆ-

**ದಳಕೃತ್ಯ 1)** ಇಲ್ಲಿ ಅನಧಿಗತ ಎಂಬ ಪದ ಏಕೆ ಬೇಕು ? ಕೇವಲ ತಥಾಭೂತಾರ್ಥಾವಗತಿಕರಣಂ ಪ್ರಮಾಣಂ ಎಂದಷ್ಟೇ ಲಕ್ಷಣ ಹೇಳಬಹುದಲ್ಲ ? ಎಂದರೆ, ಅದು ಸರಿಯಲ್ಲ. ಕಾರಣ - ಇಷ್ಟೇ ಲಕ್ಷಣ ಹೇಳಿದರೆ ಸ್ಮೃತಿಗೆ ಕಾರಣವಾದ ಸಂಸ್ಕಾರದಲ್ಲಿ ಅತಿವ್ಯಾಪ್ತಿ ಬರುತ್ತದೆ. ಏಕೆಂದರೆ - ಸ್ಮೃತಿಯೂ ಸಹ 'ತಥಾಭೂತಾರ್ಥ-ವಿಷಯಕಾವಗತಿ' ಆಗಿರುವುದರಿಂದ (ಯಥಾವಸ್ಥಿತಜ್ಞೇಯ-ವಿಷಯೀಕಾರಿಜ್ಞಾನ

ಆಗಿರುವುದರಿಂದ) ಅಂತಹ ಸ್ಮೃತಿಗೆ ಕಾರಣವಾದ ಸಂಸ್ಕಾರದಲ್ಲಿ ತಥಾಭೂತಾರ್ಥ-ವಗತಿಕಾರಣತ್ವವು ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ.

ಅದರ ಪರಿಹಾರಕ್ಕಾಗಿ ಅನಧಿಗತ ಎಂಬ ಪದ ಬೇಕು. ಸ್ಮೃತಿಯಾದರೋ ಪೂರ್ವಾನುಭೂತಾರ್ಥವಿಷಯಕಾವಗತಿಯಾಗಿರುವುದರಿಂದ (ಅಧಿಗತತಥಾ-ಭೂತಾರ್ಥಾವಗತಿ ಆಗಿರುವುದರಿಂದ) ಅನಧಿಗತತಥಾಭೂತಾರ್ಥಾವಗತಿ ಆಗಿಲ್ಲವಾದ್ದರಿಂದ, ಅದಕ್ಕೆ ಕಾರಣವಾದ ಸಂಸ್ಕಾರದಲ್ಲಿ ಅನಧಿಗತತಥಾಭೂತಾರ್ಥಾ-ವಗತಿಕಾರಣತ್ವವು ಬರುವುದಿಲ್ಲವಾದ್ದರಿಂದ ಸ್ಮೃತಿಕಾರಣವಾದ ಸಂಸ್ಕಾರದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ ಎಂದು ಭಾವ.

**ದಳಕೃತ್ಯ 2)** ಇಲ್ಲಿ ತಥಾಭೂತಾರ್ಥ ಎಂದೇಕೆ ಹೇಳಬೇಕು ? ಕೇವಲ ಅನಧಿಗತಾರ್ಥಾವಗತಿಕಾರಣಂ ಪ್ರಮಾಣಂ ಎಂದಷ್ಟೇ ಹೇಳಬಹುದಲ್ಲವೇ ? ಎಂದರೆ, ಅದು ಸರಿಯಲ್ಲ. ಕಾರಣ - ಇಷ್ಟೇ ಲಕ್ಷಣ ಹೇಳಿದರೆ ಶುಕ್ತಿರಜತಾದಿಜ್ಞಾನಸಾಧನವಾದ ದುಷ್ಟೇಂದ್ರಿಯದಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಇದಂ ರಜತಂ' ಎಂಬ ಜ್ಞಾನವು ಅನಧಿಗತಾರ್ಥವಿಷಯಕಾವಗತಿ ಆಗಿರುವುದರಿಂದ (ಪೂರ್ವದಲ್ಲಿ ತಿಳಿಯಲ್ಪಡದ ಯಾವುದೋ ಒಂದು ಅರ್ಥವನ್ನು ವಿಷಯೀಕರಿಸುವ ಜ್ಞಾನವಾದ್ದರಿಂದ) ಅದಕ್ಕೆ ಸಾಧನವಾದ ದುಷ್ಟೇಂದ್ರಿಯದಲ್ಲಿ ಅನಧಿಗತಾರ್ಥಾವಗತಿಕಾರಣತ್ವ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ.

ಅದರ ಪರಿಹಾರಕ್ಕಾಗಿ ತಥಾಭೂತಾರ್ಥ ಎಂದು ಹೇಳಬೇಕು. 'ಇದಂ ರಜತಂ' ಎಂಬ ಜ್ಞಾನವು ಅನಧಿಗತಾರ್ಥವಿಷಯಕಾವಗತಿ ಆಗಿದೆಯೇ ಹೊರತು ತಥಾಭೂತಾನಧಿಗತಾರ್ಥವಿಷಯಕಾವಗತಿ (ಅನಧಿಗತ-ಯಥಾವಸ್ಥಿತಜ್ಞೇಯ-ವಿಷಯೀಕಾರಿಜ್ಞಾನ) ಆಗಿಲ್ಲವಾದ್ದರಿಂದ, ಅದಕ್ಕೆ ಸಾಧನವಾದ ದುಷ್ಟೇಂದ್ರಿಯದಲ್ಲಿ ಅನಧಿಗತತಥಾಭೂತಾರ್ಥಾವಗತಿಕಾರಣತ್ವವು ಬಾರದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ.

**ದಳಕೃತ್ಯ 3)** ಇಲ್ಲಿ ಗಂತೃ ಎಂದೇಕೆ ಹೇಳಬೇಕು ? ಕೇವಲ ಅನಧಿಗತತಥಾಭೂತಾರ್ಥಃ ಪ್ರಮಾಣಂ ಎಂದಷ್ಟೇ ಹೇಳಬಹುದಲ್ಲವೇ ? ಎಂದರೆ, ಅದು ಸರಿಯಲ್ಲ. ಕಾರಣ - ಇಷ್ಟೇ ಲಕ್ಷಣ ಹೇಳಿದರೆ ಪದಾರ್ಥದಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ಘಟವು ಅನಧಿಗತವಾಗಿದೆ (ಅಜ್ಞಾತವಾಗಿದೆ) ಮತ್ತು ತಥಾಭೂತವೂ

(ಯಥಾರ್ಥವೂ) ಆಗಿದೆ. ಆದ್ದರಿಂದ ಅತಿವ್ಯಾಪ್ತಿ. ಅದರ ಪರಿಹಾರಕ್ಕಾಗಿ ಕೇವಲ ಅರ್ಥಃ ಪ್ರಮಾಣಂ ಎಂದಲ್ಲ, ಕಿಂತು ಅರ್ಥಾವಗತಿಃ ಪ್ರಮಾಣಂ ಎಂದು ಹೇಳಬೇಕು. ಘಟವು ಅನಧಿಗತವಾದ ತಥಾಭೂತವಾದ ಅರ್ಥ ಆಗಿದೆಯೇ ಹೊರತು ಅರ್ಥಾವಗತಿ ಆಗಿಲ್ಲ. ಆದ್ದರಿಂದ ಅರ್ಥದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

ಇನ್ನು ಅನಧಿಗತತಥಾಭೂತಾರ್ಥಾವಗತಿಃ ಪ್ರಮಾಣಂ ಎಂದಷ್ಟೇ ಹೇಳಿದರೆ ಫಲಭೂತವಾದ ಅವಗತಿಯಲ್ಲಿಯೇ (ಜ್ಞಾನದಲ್ಲಿಯೇ) ಅತಿವ್ಯಾಪ್ತಿ ಬರುತ್ತದೆ. 'ಅಯಂ ಘಟಃ' ಎಂಬ ಫಲಜ್ಞಾನವು ಅನಧಿಗತತಥಾಭೂತಾರ್ಥವಿಷಯಕಾವಗತಿ ಆಗಿರುವುದರಿಂದ ಘಟಾದಿಜ್ಞಾನದಲ್ಲಿ ಅತಿವ್ಯಾಪ್ತಿ ಎಂದು ಭಾವ. ಅದರ ಪರಿಹಾರಕ್ಕಾಗಿ ಅವಗತಿಕಾರಣಂ ಪ್ರಮಾಣಂ ಎಂದು ಹೇಳಬೇಕು. ಘಟಾದಿಜ್ಞಾನವು ಸ್ವಯಂ ಅವಗತಿರೂಪವಾಗಿದೆಯೇ ಹೊರತು ಅವಗತಿಕಾರಣವಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿ ಬರುವುದಿಲ್ಲ.

ಈ ರೀತಿಯಾಗಿ ಅರ್ಥದಲ್ಲಿ ಹಾಗೂ ಜ್ಞಾನದಲ್ಲಿ ಬರುವ ಅತಿವ್ಯಾಪ್ತಿಗಳ ಪರಿಹಾರಕ್ಕಾಗಿ ಗಂತೃಪದವು ಬೇಕು ಎಂದು ಅಭಿಪ್ರಾಯ.

**ದಳಕೃತ್ಯ 4)** ಇಲ್ಲಿ ಅನಧಿಗತತಥಾಭೂತಾರ್ಥಾವಗತಿಕಾರಣಂ ಪ್ರಮಾಣಂ ಎಂದಷ್ಟೇ ಲಕ್ಷಣ ಹೇಳಬಹುದಲ್ಲವೇ ? ಎಂದರೆ, ಅದೂ ಸರಿಯಲ್ಲ. ಕಾರಣ - ಇಷ್ಟೇ ಲಕ್ಷಣ ಹೇಳಿದರೆ ಕರ್ತೃವಿನಲ್ಲಿ ಹಾಗೂ ಪ್ರಮೇಯದಲ್ಲಿ ಅತಿವ್ಯಾಪ್ತಿ ಬರುತ್ತದೆ. ಕ್ರರ್ತೃವಾದ ಜೀವನೂ ಅವಗತಿಕಾರಣನಾದ್ದರಿಂದ, ಮತ್ತು ಪ್ರಮೇಯವೂ ವಿಷಯತ್ವೇನ ಅವಗತಿಕಾರಣವಾದ್ದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುತ್ತದೆ.

ಅದರ ಪರಿಹಾರಕ್ಕಾಗಿ ಗಂತೃಶಬ್ದಾರ್ಥದಲ್ಲಿ ಅಂತರ್ಗತವಾದ 'ಕಾರಣ'ಪದಕ್ಕೆ ಸಾಧನ ಎಂದು ಅರ್ಥ ವಿವಕ್ಷಿಸಲಾಗುತ್ತದೆ. ಕ್ರರ್ತೃ ಮತ್ತು ಪ್ರಮೇಯಗಳು ಅವಗತಿಕಾರಣವಾದರೂ ಅವಗತಿಸಾಧನವಾಗಿಲ್ಲ. ಪ್ರಮಾತಾ ಹಾಗೂ ಪ್ರಮೇಯ ಇದ್ದರೂ ಸಹ ಪ್ರಮಾ ಹುಟ್ಟುವುದಿಲ್ಲವಾದ್ದರಿಂದ, ಪ್ರಮಾತಾ-ಪ್ರಮೇಯಗಳಲ್ಲಿ ಅವಿಲಂಬೇನ ಪ್ರಮೋತ್ಪಾದಕತ್ವರೂಪವಾದ ಸಾಧನತ್ವ ಇಲ್ಲವಾದ್ದರಿಂದ, ಕ್ರರ್ತೃವಿನಲ್ಲಿ ಮತ್ತು ಪ್ರಮೇಯದಲ್ಲಿ ಅನಧಿಗತತಥಾಭೂತಾರ್ಥಾವಗತಿಸಾಧನತ್ವ ಬಾರದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ.

ಹಾಗಾದರೆ ''ಅನಧಿಗತತಥಾಭೂತಾರ್ಥಾವಗತಿಸಾಧನಂ ಪ್ರಮಾಣಂ'' ಎಂಬುದಾಗಿ ಪ್ರಮಾಣದ ನಿಷ್ಕೃಷ್ಟ ಲಕ್ಷಣವಾಗುತ್ತದೆ.

**ಟೀಕಾ ವಿಶೇಷಾರ್ಥ 1)**

**ಟೀಕಾ :- ಅಸ್ತು ತರ್ಹಿ ಸಿದ್ಧಸಾಧನತಾ ಶಾಸ್ತ್ರಸ್ಯ । ಕೋ ದೋಷ ಇತಿ ಚೇತ್ ।**

ಗುರುರಾಜೀಯ ಟಿಪ್ಪಣಿಯಲ್ಲಿ ತಿಳಿಸಿದ ವಿಶೇಷಾರ್ಥ :-

ಧಾರಾವಾಹಿಕದ್ವಿತೀಯಾದಿಜ್ಞಾನಸಾಧನವಾದ ಚಕ್ಷುರಾದಿಗಳು ಸಿದ್ಧಾರ್ಥಬೋಧಕವಾದರೂ ಯಥಾರ್ಥಜ್ಞಾನಸಾಧನವಾದ್ದರಿಂದ ಅವುಗಳಿಗೆ ಪ್ರಾಮಾಣ್ಯವು ಉಪಪನ್ನವಾಗುವಂತೆ, ಶಾಸ್ತ್ರವು ಸಿದ್ಧಾರ್ಥಬೋಧಕವಾದರೂ ಯಥಾರ್ಥಜ್ಞಾನಸಾಧನವಾದ್ದರಿಂದ ಅದಕ್ಕೆ ಪ್ರಾಮಾಣ್ಯವು ಉಪಪನ್ನವಾಗುವುದರಿಂದ ಅಪ್ರಾಮಾಣ್ಯಪ್ರಸಂಗದೋಷ ಬರುವುದಿಲ್ಲ ಎಂದು ಅಲ್ಲಿ ಅಭಿಪ್ರಾಯ.

**ಟೀಕಾವಿಶೇಷಾರ್ಥ 2)**

**ಟೀಕಾ :- ಪರಾರ್ಥತ್ವಾಚ್ಛಾಸ್ತ್ರಸ್ಯ ಪರಸಿದ್ಧಬೋಧನೇ ಅನುಪಾದೇಯತ್ವಂ ಸ್ಯಾದಿತ್ಯೇಕಃ ।**

ಪ್ರಾಮಾಣ್ಯಸಾಮಾನ್ಯಕ್ಕೆ ಪ್ರಯೋಜನವತ್ವದಿಂದ ವ್ಯಾಪ್ತಿ ಇಲ್ಲದೇ ಹೋದರೂ ಸಹ ಅದರ ವಿಶೇಷವಾದ ವಾಕ್ಯಪ್ರಾಮಾಣ್ಯಕ್ಕೆ ಪ್ರಯೋಜನವತ್ವದಿಂದ ವ್ಯಾಪ್ತಿಯು

**ಯಾಥಾರ್ಥ್ಯಮೇವ ಪ್ರಾಮಾಣ್ಯಮಪಿ ವಾಕ್ಯಂ ಪ್ರಯೋಜಕಮ್ ।**
**ಮಾನತ್ವಮೇತಿ... ...**

ಎಂಬ ಅನುವ್ಯಾಖ್ಯಾನಸಿದ್ಧವಾದ್ದರಿಂದ, ಪ್ರಕೃತದಲ್ಲಿ ಪರಾರ್ಥವಾದ ಶಾಸ್ತ್ರವು ಪರರಿಗೆ ಸಿದ್ಧವಾದ ಅರ್ಥವನ್ನೇ ಬೋಧನೆ ಮಾಡಿದರೆ ಯಾವ ಪ್ರಯೋಜನವೂ ಇರುವುದಿಲ್ಲವಾದ್ದರಿಂದ, ಪ್ರಯೋಜನವತ್ವರೂಪ ವ್ಯಾಪಕ ಇಲ್ಲದ ಕಾರಣ ವ್ಯಾಪ್ಯವಾದ ವಾಕ್ಯಪ್ರಾಮಾಣ್ಯವೂ ಇಲ್ಲದೇ ಹೋಗಬೇಕಾಗುವುದರಿಂದ ಅಪ್ರಮಾಣ್ಯಪ್ರಸಂಗವೇ ದೋಷವಾಗುತ್ತದೆ ಎಂದು ಭಾವ.

**ಟೀಕಾ :- ಏವಮಯಥಾರ್ಥಪರತ್ವಮನ್ಯಥಾಪ್ರತಿಪಾದಕತ್ವ-ಮಿತ್ಯಭಿಪ್ರೇತ್ಯೋಪಪಾದಿತಮ್ । ಅಧುನಾ ವಿಷಯಪ್ರಯೋಜನಾದಿರಹಿತತ್ವ-ಮನ್ಯಥಾಪ್ರತಿಪಾದಕತ್ವಮಭಿಪ್ರೇತ್ಯ ತತ್ಸಿದ್ಧ್ಯರ್ಥಂ ಪರಾಭಿಮತಂ ಶಾಸ್ತ್ರಸ್ಯ ವಿಷಯಾದಿಕಂ ಪರನ್ಯಾಯೇನಾಪಾಕರೋತಿ -**

## - ಮಾಯಾವಾದಖಂಡನ -

**ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಮ್ ।**

**ತನ್ಮತಂ ತದಭಿಮತಂ ಅಖಿಲಂ ವಿಷಯಾದಿಕಮಪಾಕೃತಂ ವೇದಿತವ್ಯಮ್ । ಕಥಂ ? ಉಕ್ತಪ್ರಕಾರೇಣೈವ ತನ್ಮತೇ ಅಜ್ಞಾನಾಸಂಭವಾದ್ವಿಷಯಾದೇಶ್ಚಾಜ್ಞಾನ-ಸಾಪೇಕ್ಷತ್ವಾತ್ । ಅಜ್ಞಾತೋ ಹಿ ವಿಷಯೋ ಭವತಿ । ಅನ್ಯಥಾ ಅತಿಪ್ರಸಂಗಾದಿತಿ।**

**ಅನುವಾದ :-** ಈ ರೀತಿಯಾಗಿ (ಈವರೆಗೆ) ಅನ್ಯಥಾಪ್ರತಿಪಾದಕತ್ವ ಎಂದರೆ ಅಯಥಾರ್ಥಪರತ್ವ ಎಂದು ಅಭಿಪ್ರಾಯ ಇಟ್ಟುಕೊಂಡು ಉಪಪಾದನೆ ಮಾಡಲಾಯಿತು. ಈಗ ಅನ್ಯಥಾಪ್ರತಿಪಾದಕತ್ವ ಎಂದರೆ ವಿಷಯಪ್ರಯೋಜನಾದಿರಹಿತತ್ವ ಎಂದು ಅಭಿಪ್ರಾಯ ಇಟ್ಟುಕೊಂಡವರಾಗಿ, ಆ ವಿಷಯಪ್ರಯೋಜನಾದಿರಾಹಿತ್ಯ ಸಿದ್ಧಿಗಾಗಿ ಶಾಸ್ತ್ರಕ್ಕೆ ಪರಾಭಿಮತವಾದ ವಿಷಯಾದಿಗಳನ್ನು ಪರನ್ಯಾಯದಿಂದಲೇ ನಿರಾಕರಿಸುತ್ತಾರೆ -

**ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಮ್ ।** (ಮೂಲ)

ತನ್ಮತಂ = ಪರಾಭಿಪ್ರೇತವಾದ ಅಖಿಲಂ = ವಿಷಯಾದಿಗಳು ಅಪಾಕೃತಂ = ನಿರಾಕೃತವಾದಂತೆ ತಿಳಿಯಬೇಕು. ಯಾಕೆ ? ಅಜ್ಞಾನಾಸಂಭವಾದೇವ = ಹಿಂದೆ ಹೇಳಿದ ಪ್ರಕಾರವಾಗಿ ('ಆವರಣಂ ಹ್ಯಾವ್ರಿಯಮಾಣೇನ ವ್ಯಾಪ್ತಂ' ಇತ್ಯಾದಿಯಾಗಿ ಹೇಳಿದ ಪ್ರಕಾರವಾಗಿ) ಪರಮತದಲ್ಲಿ ಅಜ್ಞಾನವು ಕೂಡುವುದಿಲ್ಲ. ಅಜ್ಞಾನ ಕೂಡುವುದಿಲ್ಲವಾದ್ದರಿಂದಲೇನೇ ಅಜ್ಞಾನಸಾಪೇಕ್ಷವಾದ ವಿಷಯಾದಿಗಳೂ ಕೂಡುವುದಿಲ್ಲ.

ವಿಷಯಾದಿಗಳು ಅಜ್ಞಾನಸಾಪೇಕ್ಷ ಯಾಕೆ ? ಎಂದರೆ, ಅಜ್ಞಾತವಾದದ್ದು (ಅಜ್ಞಾನಕ್ಕೆ ವಿಷಯವಾದದ್ದು) ತಾನೇ ವಿಷಯವಾಗುತ್ತದೆ. ಅನ್ಯಥಾ = ಹೀಗೆ ಹೇಳದಿದ್ದರೆ (ಜ್ಞಾತವಾದದ್ದೂ ವಿಷಯವಾಗಬಹುದು ಎನ್ನುವುದಾದರೆ) ಅತಿಪ್ರಸಂಗ ಬರಬೇಕಾಗುತ್ತದೆ ಎಂದು ಅಭಿಪ್ರಾಯ.

**ಟೀಕಾ ವಿಶೇಷಾರ್ಥ :-**

**ಟೀಕಾ :- ಅಧುನಾ ವಿಷಯಪ್ರಯೋಜನಾದಿರಹಿತತ್ವಮನ್ಯಥಾ-ಪ್ರತಿಪಾದಕತ್ವಮಭಿಪ್ರೇತ್ಯ ... ..**

**'ಮಂದಾರಮಂಜರಿ'ಯಲ್ಲಿ ತಿಳಿಸಿದ ಟೀಕಾವಿಶೇಷಾರ್ಥ :-**

ಅನ್ಯಥಾಪ್ರತಿಪಾದಕತ್ವ ಎಂಬುದಕ್ಕೆ ವಿಷಯಪ್ರಯೋಜನಾದಿರಹಿತತ್ವ ಎಂಬ ಅರ್ಥ ಹೇಗೆ ? ಎಂಬುದನ್ನು ವ್ಯಾಸರಾಜರು ಎರಡು ರೀತಿಯಲ್ಲಿ ತೋರಿಸಿಕೊಡುತ್ತಾರೆ -

ಒಂದು ರೀತಿ - ಲೋಕದಲ್ಲಿ ವಿಷಯಾದಿಗಳು ಇದ್ದಾಗ ಮಾತ್ರ ವೈದ್ಯಶಾಸ್ತ್ರಾದಿಗಳು ಕೆಲವು ಅರ್ಥಕ್ಕೆ ಪ್ರತಿಪಾದಕವಾದದ್ದು ಕಂಡಿದೆ. ಆದರೆ ಈ ಮಾಯಾವಾದಶಾಸ್ತ್ರವಾದರೋ ಅನ್ಯಥಾಽಪಿ=ವಿಷಯಾದಿಗಳು ಇಲ್ಲದಿದ್ದರೂ ಸಹ ಪ್ರತಿಪಾದಕಂ=ಪ್ರತಿಪಾದಕವಾಗಿದೆ. ಈ ರೀತಿಯಾಗಿ ಅನ್ಯಥಾಪ್ರತಿಪಾದಕತ್ವಾತ್ ಎಂಬುವುದರಿಂದ ವಿಷಯಾದ್ಯಭಾವವು ಅಭಿಪ್ರೇತವಾಗಿದೆ ಎಂದು ತಿಳಿಯಬೇಕು.

ಎರಡನೇ ರೀತಿ - ಅಥವಾ, (ಮಾಯಾವಾದಶಾಸ್ತ್ರದಲ್ಲಿ ವಿಷಯಾದಿಗಳು ಇಲ್ಲವಾದ್ದರಿಂದ) ವಿಷಯಾದಿರಹಿತವಾದ ಆ ಶಾಸ್ತ್ರದಲ್ಲಿಯೂ ಪ್ರೇಕ್ಷಾವಂತರಿಗೆ ಪ್ರವೃತ್ತಿ ಸಿದ್ಧಿಸುವುದಕ್ಕಾಗಿ 'ಸಾಮಾನ್ಯತಃ ವಿಷಯಾದಿಗಳು ಇವೆ' ಎಂದು ಪ್ರತಿಪಾದನೆ ಮಾಡುವುದರಿಂದ, ಅನ್ಯಥಾಪ್ರತಿಪಾದಕತ್ವಾತ್ ಎಂಬುವುದರಿಂದ ವಿಷಯಾದ್ಯಭಾವವು ಅಭಿಪ್ರೇತವಾಗಿದೆ ಎಂದು ತಿಳಿಯಬೇಕು.

**ವಿಶೇಷ ವಿವರಣೆ :-**

**ಮೂಲ :- ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಮ್ ।**

'ಮಾಯಾವಾದಪರಶು'ವ್ಯಾಖ್ಯಾನದಲ್ಲಿ ತಿಳಿಸಿದ ವಿಶೇಷ ವಿವರಣೆ -

''ಅಜ್ಞಾನ ಕೂಡುವುದಿಲ್ಲವಾದ್ದರಿಂದ ಪರಾಭಿಮತವಾದ ವಿಷಯಾದಿಗಳು ನಿರಾಕೃತವಾದಂತಾಯಿತು'' ಎಂದು ಹೇಳುವುದು ಸರಿಯಲ್ಲ. ಕಾರಣ ಹಾಗೆ ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ.

ಅಂದರೆ 'ಆವರಣಂ ಹಿ ಆವ್ರಿಯಮಾಣೇನ ವ್ಯಾಪ್ತಮ್' ಎಂದು ಹೇಳಿದ ಪ್ರಕಾರ ಆವರಣವಾದ ಅಜ್ಞಾನ ಇರಬೇಕಾದರೆ ಆವ್ರಿಯಮಾಣವಾದ ವಸ್ತು ಇರಬೇಕು. ಆದರೆ ಆವ್ರಿಯಮಾಣವಾದ ವಸ್ತು ಯಾವುದೂ ಇಲ್ಲವಾದ್ದರಿಂದ ಆವರಣವಾದ ಅಜ್ಞಾನ ಕೂಡುವುದಿಲ್ಲ ಎಂಬುದಾಗಿ ಈ ಹಿಂದೆ ಉಪಪಾದನೆ ಮಾಡಲಾಗಿದೆ. ಈ ಪ್ರಕಾರ ಅಜ್ಞಾನ ಕೂಡುವುದಿಲ್ಲವಾದ್ದರಿಂದ ವಿಷಯಾದಿಗಳು ಕೂಡುವುದಿಲ್ಲ ಎಂದು ಮೂಲದ ಅರ್ಥವಾಗುತ್ತದೆ. ಇಲ್ಲಿ ಆವ್ರಿಯಮಾಣವಾದ ವಸ್ತು ಎಂದರೆ ವಿಷಯವೇ ಹೊರತು ಬೇರೆ ಅಲ್ಲ.

ಹಾಗಾದರೆ ''ವಿಷಯ (ಆವ್ರಿಯಮಾಣವಸ್ತು) ಇಲ್ಲವಾದ್ದರಿಂದ ಅಜ್ಞಾನ ಕೂಡುವುದಿಲ್ಲ. ಅಜ್ಞಾನ ಕೂಡುವುದಿಲ್ಲವಾದ್ದರಿಂದ ವಿಷಯ ಕೂಡುವುದಿಲ್ಲ'' ಎಂದು ಹೇಳಿದಂತಾಗುವುದರಿಂದ ಅನ್ಯೋನ್ಯಾಶ್ರಯ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ವಿಷಯ ಎಂದರೆ ಅಜ್ಞಾನಕ್ಕೆ ವಿಷಯವಾದದ್ದು ಬೇರೆ. ಶಾಸ್ತ್ರಕ್ಕೆ ವಿಷಯವಾದದ್ದು ಬೇರೆ. ನಾವು ''ಅಜ್ಞಾನವಿಷಯ ಇಲ್ಲವಾದ್ದರಿಂದ ಅಜ್ಞಾನ ಕೂಡುವುದಿಲ್ಲ. ಅಜ್ಞಾನ ಕೂಡದ ಕಾರಣ ಅಜ್ಞಾನವಿಷಯ ಇಲ್ಲ'' ಎಂದು ಹೇಳುತ್ತಿದ್ದರೆ ಆಗ ಅನ್ಯೋನ್ಯಾಶ್ರಯಕ್ಕೆ ಅವಕಾಶವಿರುತ್ತಿತ್ತು. ಆದರೆ ನಾವು ಹಾಗೆ ಹೇಳುತ್ತಿಲ್ಲ.

ಕಿಂತು ''ಅಜ್ಞಾನವಿಷಯ ಇಲ್ಲವಾದ್ದರಿಂದ ಅಜ್ಞಾನ ಇಲ್ಲ. ಅಜ್ಞಾನ ಇಲ್ಲವಾದ್ದರಿಂದ ಶಾಸ್ತ್ರಕ್ಕೆ ವಿಷಯ ಇಲ್ಲ'' ಎಂಬುದಾಗಿ ಸಮರ್ಥನೆ ಮಾಡುತ್ತಿರುವುದರಿಂದ ಅನ್ಯೋನ್ಯಾಶ್ರಯ ಬರುವ ಪ್ರಸಕ್ತಿ ಇಲ್ಲ. ಐಕ್ಯವು ಅಜ್ಞಾನವಿಷಯವಾಗಲು ಸಾಧ್ಯವಿಲ್ಲವಾದ್ದರಿಂದ ಶಾಸ್ತ್ರಕ್ಕೆ ವಿಷಯವಾಗುವುದಿಲ್ಲ ಎಂದು ಹೇಳಿದಾಗ ಅನ್ಯೋನ್ಯಾಶ್ರಯಕ್ಕೆ ಪ್ರಸಕ್ತಿಯೇ ಇಲ್ಲ. ಆದ್ದರಿಂದ -

''ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಮ್ '

ಎಂದು ಆಚಾರ್ಯರು ಹೇಳಿದ್ದು ಸಮಂಜಸವೇ ಆಗಿದೆ ಎಂದು ಅಭಿಪ್ರಾಯ.

**ಟೀಕಾ :- [21]ಏವಮಜ್ಞಾನಾಸಂಭವೇನ ವಿಷಯಂ ನಿರಾಕೃತ್ಯ ಪ್ರಕಾರಾಂತರೇಣ ನಿರಾಚಷ್ಟೇ -**

---

21) ಟೀಕಾಪಾಠವಿಚಾರ :- ''ಏವಮಜ್ಞಾನಾಸಂಭವೇನ ವಿಷಯಾದೀನ್ ನಿರಾಕೃತ್ಯ ದಾರ್ಢ್ಯಾಯ ಪುನರ್ವಿಷಯಾದೀನ್ ನಿರಾಕರೋತಿ'' ಎನ್ನುವುದು ಇಲ್ಲಿ ನಿಜವಾದ ಪಾಠ ಎಂಬುದಾಗಿ 'ಮಾಯಾವಾದಪರಶು'ಕಾರರ ಅಭಿಪ್ರಾಯ.

ಏವಮಜ್ಞಾನಾಸಂಭವೇನೇತಿ ॥ ಅತ್ರ ಪ್ರಕಾರಾಂತರೇಣೇತಿ ಪ್ರಕ್ಷಿಪ್ತಮ್ । ದಾರ್ಢ್ಯಾಯ ಪುನರಿತ್ಯುಚ್ಛಿನ್ನಮ್ । ತತಶ್ಚೈವಂ ಟೀಕಾವಾಕ್ಯಪಾಠಃ । ''ಏವಮಜ್ಞಾನಾಸಂಭವೇನ ವಿಷಯಾದೀನ್ ನಿರಾಕೃತ್ಯ ದಾರ್ಢ್ಯಾಯ ಪುನರ್ವಿಷಯಾದೀನ್ ನಿರಾಕರೋತಿ'' ಇತಿ । ಅವಶ್ಯಂ ಚೈತದೇವಂ ವಿಜ್ಞೇಯಮ್ । ಇಹಾಪ್ಯಜ್ಞಾನಾಸಂಭವಮಾಶ್ರಿತ್ಯೈವ ವಿಷಯಾದಿನಿರಾಕರಣೇನ ಪ್ರಕಾರಾಂತರತ್ವಾಭಾವಾತ್ । (ಮಾಯಾವಾದಪರಶುಃ)

## - ಮಾಯಾವಾದಖಂಡನ -

**ಮಿಥ್ಯಾತ್ವೇ ಚೈಕ್ಯಸ್ಯಾತತ್ತ್ವಾವೇದಕತ್ವಮಾಗಮಸ್ಯ ಸ್ಯಾತ್ ।**

**ಐಕ್ಯಂ ಹಿ ಶಾಸ್ತ್ರಸ್ಯ ವಿಷಯತಯಾ ಪರಸ್ಯಾಭಿಮತಮ್ । ತತ್ಕಿಮಾತ್ಮಸ್ವರೂಪಾತಿರಿಕ್ತಂ ? ಉತ ತನ್ಮಾತ್ರಂ ? ಆದ್ಯೇಽಪಿ ಸತ್ಯಂ ಮಿಥ್ಯಾ ವಾ ? ನಾದ್ಯಃ । ಅದ್ವೈತಹಾನಿಪ್ರಸಂಗಾತ್ । ನ ದ್ವಿತೀಯಃ । ಐಕ್ಯಸ್ಯ ಮಿಥ್ಯಾತ್ವೇ ತತ್ಪ್ರತಿಪಾದಕಸ್ಯ ಶಾಸ್ತ್ರಸ್ಯಾತತ್ತ್ವಾವೇದಕತ್ವಂ ಸ್ಯಾತ್ ।** [22]**ತಥಾ ಚಾಪಸಿದ್ಧಾಂತಃ ಸ್ಯಾತ್ ।**

**ಅನುವಾದ :-** ಈ ರೀತಿಯಾಗಿ 'ಅಜ್ಞಾನ ಕೂಡುವುದಿಲ್ಲವಾದ್ದರಿಂದ ವಿಷಯ ಇಲ್ಲ' ಎಂಬುದಾಗಿ ವಿಷಯವನ್ನು ನಿರಾಕರಿಸಿ, ಪ್ರಕೃತ ಮತ್ತೊಂದು ರೀತಿಯಿಂದಲೂ ವಿಷಯವನ್ನು ನಿರಾಕರಿಸುತ್ತಾರೆ -

**ಮಿಥ್ಯಾತ್ವೇ ಚೈಕ್ಯಸ್ಯಾತತ್ತ್ವಾವೇದಕತ್ವಮಾಗಮಸ್ಯ ಸ್ಯಾತ್ ।** (ಮೂಲ)

ಐಕ್ಯಕ್ಕೆ ಮಿಥ್ಯಾತ್ವವನ್ನು ಹೇಳುವುದಾದರೆ ತತ್ಪ್ರತಿಪಾದಕವಾದ ಶಾಸ್ತ್ರಕ್ಕೆ ಅತತ್ತ್ವಾವೇದಕತ್ವ ಬರಬೇಕಾಗುತ್ತದೆ ಎಂದು ಮೂಲಾರ್ಥ.

ಐಕ್ಯವು ಶಾಸ್ತ್ರಕ್ಕೆ ವಿಷಯವಾಗಿದೆ ಎಂಬುದಾಗಿ ಪರರಿಗೆ ಅಭಿಮತ(ಸಮ್ಮತ) ವಾಗಿದೆ. ಆ ಐಕ್ಯವು ಆತ್ಮಸ್ವರೂಪದಿಂದ ಅತಿರಿಕ್ತವಾಗಿದೆಯೋ ? ಅಥವಾ ಆತ್ಮಸ್ವರೂಪವೇ ಆಗಿದೆಯೋ ?

ಐಕ್ಯವು ಆತ್ಮಸ್ವರೂಪದಿಂದ ಅತಿರಿಕ್ತ ಎನ್ನುವುದಾದರೆ, ಅಂತಹ ಐಕ್ಯವು ಆತ್ಮಸ್ವರೂಪದಿಂದ ಅತಿರಿಕ್ತವಾಗಿ ಸತ್ಯವಾಗಿದೆಯೋ ? ಮಿಥ್ಯಾ ಆಗಿದೆಯೋ ?

ಐಕ್ಯವು ಆತ್ಮಸ್ವರೂಪದಿಂದ ಅತಿರಿಕ್ತವಾಗಿ ಸತ್ಯವಾಗಿದೆ ಎನ್ನುವುದಾದರೆ, ಬ್ರಹ್ಮ ಒಂದು ಸತ್ಯ, ಐಕ್ಯವೂ ಸತ್ಯ, ಹೀಗೆ ಎರಡು ಸತ್ಯವಸ್ತುಗಳನ್ನು ಅಂಗೀಕರಿಸಿದಂತಾಗುವುದರಿಂದ ಅದ್ವೈತಹಾನಿಯಾಗಬೇಕಾಗುತ್ತದೆ. (ಅದ್ವೈತ ಎಂದರೆ ಸದದ್ವೈತ = ಪಾರಮಾರ್ಥಿಕಸತ್ಯವಾದ ವಸ್ತು ಒಂದೇ ಎಂದರ್ಥ. ಪ್ರಕೃತ

---

22) ತಥಾ ಚೇತಿ ॥ ಪೂರ್ವಾಚಾರ್ಯೈರ್ಣ್ಯೈಕ್ಯಪ್ರತಿಪಾದಕಂ ಶಾಸ್ತ್ರಂ ತತ್ತ್ವಾವೇದಕಂ ಪ್ರಮಾಣಂ, ಐಕ್ಯಾಪ್ರತಿಪಾದಕಮತತ್ತ್ವಾವೇದಕಂ ಪ್ರಮಾಣಮಿತ್ಯಂಗೀಕಾರಾದಿತಿ ಭಾವಃ । (ಮಾಯಾವಾದಪರಶುಃ)

ಎರಡು ಸತ್ಯವಸ್ತುಗಳನ್ನು ಅಂಗೀಕರಿಸಿದರೆ ಸದದ್ವೈತಕ್ಕೆ ಹಾನಿಯಾಗುತ್ತದೆ ಎಂದು ಭಾವ.)

ಇನ್ನು ಐಕ್ಯವು ಮಿಥ್ಯಾ ಎನ್ನುವುದಾದರೆ, ಅಂತಹ ಮಿಥ್ಯಾಭೂತವಾದ ಐಕ್ಯವನ್ನು ಪ್ರತಿಪಾದನೆ ಮಾಡುವ ಶಾಸ್ತ್ರವು ಅತತ್ತಾವೇದಕವಾಗಬೇಕಾಗುತ್ತದೆ. ಹಾಗಾಗಿ ಶಾಸ್ತ್ರವನ್ನು ತತ್ತಾವೇದಕ ಎಂದು ಒಪ್ಪಿರುವ ನಿಮ್ಮ ಪೂರ್ವಾಚಾರ್ಯರ ಅಭಿಪ್ರಾಯಕ್ಕೆ ವಿರುದ್ಧವಾಗಿ ಅಂಗೀಕರಿಸಿದಂತಾಗುವುದರಿಂದ ಅಪಸಿದ್ಧಾಂತ ಬರಬೇಕಾಗುತ್ತದೆ.

**ಟೀಕಾವಿಶೇಷಾರ್ಥ :**

'ಮಾಯಾವಾದಪರಶು'ವಿನಲ್ಲಿ ತಿಳಿಸಿದ ಟೀಕಾವಿಶೇಷಾರ್ಥ-

**ಟೀಕಾ :- ಏವಮಜ್ಞಾನಾಸಂಭವೇನ ವಿಷಯಂ ನಿರಾಕೃತ್ಯ ಪ್ರಕಾರಾಂತರೇಣ ನಿರಾಚಷ್ಟೇ -**

**ಮಿಥ್ಯಾತ್ವೇ ಚೈಕ್ಯಸ್ಯಾತತ್ತ್ವಾವೇದಕತ್ವಮಾಗಮಸ್ಯ ಸ್ಯಾತ್ । (ಮೂಲ)**

ಯದ್ಯಪಿ ಮೂಲದಲ್ಲಿ ವಿಷಯಾದಿಗಳ ನಿರಾಕರಣೆಯನ್ನು ಸಾಕ್ಷಾತ್ತಾಗಿ ಮಾಡಿಲ್ಲ. ಆದರೂ ಸಹ ಐಕ್ಯಮಿಥ್ಯಾತ್ವನಿರಾಕರಣೆ ಮಾಡುವುದು ಈಗ ಅಸಂಗತವಾದ್ದರಿಂದ, ಪರಿಶೇಷತಃ ಐಕ್ಯಕ್ಕೆ ಆತ್ಮಸ್ವರೂಪತ್ವವನ್ನು ಸಾಧಿಸಿ (ಐಕ್ಯವು ಆತ್ಮಸ್ವರೂಪ ಎಂದೇ ಹೇಳಬೇಕು ಎಂಬುದಾಗಿ ಹೇಳಿ), ಐಕ್ಯವು ಆತ್ಮಸ್ವರೂಪವಾಗುವುದಾದರೆ (ಆತ್ಮನಂತೆ ನಿತ್ಯಸಿದ್ಧವಾಗುವ ಕಾರಣ) ವಿಷಯತ್ವ ಕೂಡುವುದಿಲ್ಲ ಎಂಬುದರಲ್ಲಿ ತಾತ್ಪರ್ಯವು ಅಭ್ಯುಪೇತವಾಗಿದೆ ಎಂಬ ಅಭಿಪ್ರಾಯದಿಂದ ''ವಿಷಯಾದಿಗಳನ್ನು ನಿರಾಕರಿಸುತ್ತಾರೆ'' ಎಂದು ಟೀಕೆಯಲ್ಲಿ ಅವತಾರಿಕೆ ನೀಡಿದ್ದಾರೆ ಎಂದು ತಿಳಿಯಬೇಕು.

**ಟೀಕಾ :- ಕಿಂಚ -**

**- ಮಾಯಾವಾದಖಂಡನ -**

ಸತ್ಯತಾ ಚ ಭೇದಸ್ಯ ।

**ಪರಸ್ಪರವಿರುದ್ಧಯೋರನ್ಯತರನಿಷೇಧಸ್ಯಾನ್ಯತರವಿಧಿನಾ ವ್ಯಾಪ್ತತ್ವಾದೈಕ್ಯಸ್ಯ ಮಿಥ್ಯಾತ್ವೇ ಭೇದಸ್ಯ ಸತ್ಯತಾ ಚ ಸ್ಯಾತ್ । ಅತ ಐಕ್ಯಮಾತ್ಮಸ್ವರೂಪ-ಮೇವೇತ್ಯಂಗೀಕಾರ್ಯಮ್ । ಸ್ವರೂಪಸ್ಯ ಚ ಸ್ವಪ್ರಕಾಶತ್ವೇನ ನ ವಿಷಯತಾ ಸಂಭವತೀತಿ ।**

**ಅನುವಾದ :-** ಐಕ್ಯವು ಮಿಥ್ಯಾ ಎನ್ನುವ ಎರಡನೇ ಪಕ್ಷಕ್ಕೆ ಮತ್ತೊಂದು ದೋಷವನ್ನು ಹೇಳುತ್ತಾರೆ -

**ಸತ್ಯತಾ ಚ ಭೇದಸ್ಯ ।** (ಮೂಲ)

ಐಕ್ಯಕ್ಕೆ ಮಿಥ್ಯಾತ್ವ ಹೇಳುವುದಾದರೆ ಭೇದಕ್ಕೆ ಸತ್ಯತ್ವ ಬರಬೇಕಾಗುತ್ತದೆ ಎಂದು ಮೂಲಾರ್ಥ.

ಪರಸ್ಪರವಿರುದ್ಧವಾದ ಧರ್ಮಗಳಲ್ಲಿ ಅನ್ಯತರನಿಷೇಧವು ಅನ್ಯತರವಿಧಿಯಿಂದ ವ್ಯಾಪ್ತವಾದದ್ದರಿಂದ (ಒಂದನ್ನು ನಿಷೇಧಿಸಿದರೆ ಮತ್ತೊಂದರ ವಿಧಿ ಪ್ರಾಪ್ತವಾಗುವುದರಿಂದ) ಪ್ರಕೃತದಲ್ಲಿ ಐಕ್ಯ-ಭೇದ ಎಂಬ ಪರಸ್ಪರವಿರುದ್ಧವಾದ ಎರಡು ಧರ್ಮಗಳಲ್ಲಿ ಐಕ್ಯಕ್ಕೆ ಮಿಥ್ಯಾತ್ವವನ್ನು ಅಂಗೀಕರಿಸುವುದಾದರೆ ಭೇದಕ್ಕೆ ಸತ್ಯತ್ವವು ಸಿದ್ಧವಾಗುತ್ತದೆ. ಆದ್ದರಿಂದ ಪರಿಶೇಷತಃ ಐಕ್ಯವು ಆತ್ಮಸ್ವರೂಪವೇ ಆಗಿದೆ ಎಂದು ಹೇಳಬೇಕು. ಆತ್ಮಸ್ವರೂಪವು ಸ್ವಪ್ರಕಾಶವಾಗಿ ನಿತ್ಯಸಿದ್ಧವಾದ್ದರಿಂದ ಐಕ್ಯವೂ ಸ್ವಪ್ರಕಾಶವಾಗಿ ನಿತ್ಯವಾಗಿದೆ ಎಂದೇ ಆಗುತ್ತದೆ. ಸಿದ್ಧವಾದ ಐಕ್ಯಕ್ಕೆ ವಿಷಯತ್ವವು ಕೂಡುವುದಿಲ್ಲ (ಐಕ್ಯವು ಶಾಸ್ತ್ರಕ್ಕೆ ವಿಷಯವಾಗುವುದಿಲ್ಲ) ಎಂದು ಅಭಿಪ್ರಾಯ.

**ವಿಶೇಷಾರ್ಥ 1)**

'ಮಾಯಾವಾದಪರಶು'ವಿನಲ್ಲಿ ತಿಳಿಸಿದ ಮೂಲದ ವಿಶೇಷಾರ್ಥ -

**ಸತ್ಯತಾ ಚ ಭೇದಸ್ಯ । (ಮೂಲ)**

'ಐಕ್ಯಕ್ಕೆ ಮಿಥ್ಯಾತ್ವ ಹೇಳಿದರೆ ಭೇದಕ್ಕೆ ಸತ್ಯತ್ವ ಬರಬೇಕಾಗುತ್ತದೆ' ಎಂದು ಹೇಳುವುದು ಸರಿಯಲ್ಲ. ಏಕೆಂದರೆ - ಐಕ್ಯವು ಮಿಥ್ಯಾ ಎಂದರೆ ಅಸತ್ ಎಂದು ಅರ್ಥವಲ್ಲ. ನಾವು ಐಕ್ಯಕ್ಕೆ ಅನಿರ್ವಚನೀಯತ್ವವನ್ನು ಅಂಗೀಕರಿಸಿದ್ದೇವೆಯೇ ಹೊರತು ಅಸತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ಹೀಗೆ ಹೇಳಲು ಬರುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಕಾರಣ ಐಕ್ಯಕ್ಕೆ ಮಿಥ್ಯಾತ್ವವನ್ನು ಹೇಳಿದರೆ ಜ್ಞಾನನಿವರ್ತ್ಯವಾಗುವುದರಿಂದ (ಜ್ಞಾನನಿವರ್ತ್ಯವಾದದ್ದು ಅಸತ್ ಆಗುತ್ತದೆ ಎಂಬುದಾಗಿ ನ್ಯಾಯಸುಧಾದಿಗ್ರಂಥಗಳಲ್ಲಿ ಸಮರ್ಥಿಸಿರುವುದರಿಂದ) ಶುಕ್ತಿರೂಪ್ಯಾದಿಗಳಂತೆ ಅಸತ್ವವೇ ಪ್ರಾಪ್ತವಾಗುತ್ತದೆ. ಐಕ್ಯಕ್ಕೆ ಅಸತ್ವ ಹೇಳಿದರೆ ಭೇದಕ್ಕೆ ಸತ್ಯತ್ವವು ಸ್ವಾಭಾವಿಕವಾಗಿ ಸಿದ್ಧವಾಗುತ್ತದೆ ಎನ್ನುವುದು ಮೂಲದ ಗೂಡಾಭಿಪ್ರಾಯ.

**ವಿಶೇಷಾರ್ಥ :- 2)**

'ಮಂದಾರಮಂಜರಿ'ಯಲ್ಲಿ ತೋರಿಸಿದ ವಿಶೇಷಾರ್ಥ -

**ಸತ್ಯತಾ ಚ ಭೇದಸ್ಯ । (ಮೂಲ)**

**ಟೀಕಾ :- ಪರಸ್ಪರವಿರುದ್ಧಯೋರನ್ಯತರನಿಷೇಧಸ್ಯಾನ್ಯತರವಿಧಿನಾ ವ್ಯಾಪ್ತತ್ವಾದೈಕ್ಯಸ್ಯ ಮಿಥ್ಯಾತ್ವೇ ಭೇದಸ್ಯ ಸತ್ಯತಾ ಚ ಸ್ಯಾತ್ ।**

ಪರರು ಭೇದಸಾಮಾನ್ಯಕ್ಕೇ (ಎಲ್ಲ ಭೇದಗಳಿಗೂ) ಮಿಥ್ಯಾತ್ವವನ್ನು ಅಂಗೀಕರಿಸುವುದರಿಂದ 'ಯತ್ರ ಐಕ್ಯಸ್ಯ ಮಿಥ್ಯಾತ್ವಂ ತತ್ರ ಭೇದಸ್ಯ ಸತ್ಯತ್ವಂ' (ಎಲ್ಲಿ ಭೇದಕ್ಕೆ ಮಿಥ್ಯಾತ್ವ ಹೇಳುತ್ತೀರೋ ಅಲ್ಲಿ ಭೇದಕ್ಕೆ ಸತ್ಯತ್ವ ಸಿದ್ಧಿಸುತ್ತದೆ) ಎಂಬ ವ್ಯಾಪ್ತಿಗೆ ಪರನನ್ನು ಕುರಿತು ದೃಷ್ಟಾಂತ ಯಾವುದೂ ಇಲ್ಲವಾದ್ದರಿಂದ ಐಕ್ಯಮಿಥ್ಯಾತ್ವದಿಂದ ಭೇದಸತ್ಯತ್ವಾಪಾದನ ಹೇಗೆ ಮಾಡುತ್ತೀರಿ ? ಎಂಬುದಾಗಿ ಶಂಕೆ ಬಂದರೆ ಅದಕ್ಕೆ ಹೇಳಿದರು -

ಪರಸ್ಪರವಿರುದ್ಧಯೋಃ ಅನ್ಯತರನಿಷೇಧಸ್ಯ ಅನ್ಯತರವಿಧಿನಾ ವ್ಯಾಪ್ತತ್ವಾತ್ .....

ಎಂದು. ನಿಜವೇ, 'ಯತ್ರ ಐಕ್ಯಸ್ಯ ಮಿಥ್ಯಾತ್ವಂ ತತ್ರ ಭೇದಸ್ಯ ಸತ್ಯತ್ವಂ' ಎಂಬುದಾಗಿ ವಿಶೇಷವ್ಯಾಪ್ತಿಯನ್ನು ಹೇಳಲು ಬರುವುದಿಲ್ಲ. ಆದರೆ 'ಯತ್ರ ಪರಸ್ಪರವಿರುದ್ಧಯೋಃ ಅನ್ಯತರಸ್ಯ ಮಿಥ್ಯಾತ್ವಂ ತತ್ರಾನ್ಯಾತರಸ್ಯ ಸತ್ಯತ್ವಮ್' ''ಎಲ್ಲಿ ಪರಸ್ಪರವಿರುದ್ಧವಾದ ಧರ್ಮಗಳಲ್ಲಿ ಒಂದಕ್ಕೆ ಮಿಥ್ಯಾತ್ವವನ್ನು ಹೇಳಿದರೆ ಅಲ್ಲಿ ಮತ್ತೊಂದಕ್ಕೆ ಸತ್ಯತ್ವ ಸಿದ್ಧಿಸುತ್ತದೆ'' ಎಂಬುದಾಗಿ ಸಾಮಾನ್ಯವ್ಯಾಪ್ತಿ ಹೇಳಲು ಬಂದೇ ಬರುತ್ತದೆ. ಅದಕ್ಕೆ ದೃಷ್ಟಾಂತವನ್ನೂ ತೋರಿಸಬಹುದಾಗಿದೆ. ಬ್ರಹ್ಮನಲ್ಲಿ ದುಃಖಾತ್ಮಕತ್ವವು ಮಿಥ್ಯಾ ಆಗಿದ್ದರಿಂದ ಆನಂದರೂಪತ್ವವು ಸತ್ಯವಾಗಿದೆ. (ಬ್ರಹ್ಮನಲ್ಲಿ ಆನಂದಾತ್ಮಕತ್ವವೂ ಅಸತ್ಯ ಎನ್ನುವುದಾದರೆ ಮೋಕ್ಷಕ್ಕೆ ಅಪುರುಷಾರ್ಥತ್ವ ಬರಬೇಕಾಗುತ್ತದೆ. ಮತ್ತು 'ಆನಂದೋ ಬ್ರಹ್ಮ' ಇತ್ಯಾದಿಶ್ರುತಿಯು ಅತತ್ವಾವೇದಕವಾಗಬೇಕಾಗುತ್ತದೆ ಎಂದು ಭಾವ.)

ಈ ರೀತಿಯಾಗಿ ಸಾಮಾನ್ಯವ್ಯಾಪ್ತಿಯನ್ನು ದೃಷ್ಟಾಂತಸಹಿತವಾಗಿ ಹೇಳಲು ಬರುತ್ತದೆಯಾದ್ದರಿಂದ, ಪ್ರಕೃತದಲ್ಲಿ ಐಕ್ಯ-ಭೇದ ಎಂಬ ಪರಸ್ಪರವಿರುದ್ಧಧರ್ಮಗಳಲ್ಲಿ ಐಕ್ಯಕ್ಕೆ ಮಿಥ್ಯಾತ್ವವನ್ನು ಹೇಳಿದರೆ ಭೇದಕ್ಕೆ ಸತ್ಯತ್ವವು ಸ್ವಾಭಾವಿಕವಾಗಿ ಸಿದ್ಧವಾಗುತ್ತದೆ. ಆದ್ದರಿಂದ 'ಸತ್ಯತಾ ಚ ಭೇದಸ್ಯ' ಎಂಬುದಾಗಿ ಭೇದಕ್ಕೆ ಸತ್ಯತ್ವಾಪಾದನ ಮಾಡಿರುವುದು ಯುಕ್ತವೇ ಆಗಿದೆ ಎಂದು ಅಭಿಪ್ರಾಯ.

**ಅವತಾರಿಕೆ:-** ಹಿಂದೆ, ಐಕ್ಯವು ಆತ್ಮಸ್ವರೂಪಾತಿರಿಕ್ತವೋ ? ಆತ್ಮನಿಂದ ಅಭಿನ್ನವೋ ? ಅತಿರಿಕ್ತ ಎಂದರೆ ಮಿಥ್ಯಾವೋ ? ಸತ್ಯವೋ ? ಅಭಿನ್ನ ಎಂದರೂ ಸಹ ನಿರ್ವಿಶೇಷಾಭಿನ್ನವೋ ? ತದ್ವಿಶೇಷವೋ ? ಎಂಬುದಾಗಿ ವಿಕಲ್ಪವನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಆಚಾರ್ಯರು ಅತಿರಿಕ್ತವಾಗಿ ಮಿಥ್ಯಾ ಎಂಬ ಪಕ್ಷದಲ್ಲಿ 'ನ ಹಿ ಬ್ರಹ್ಮಾತ್ಮೈಕ್ಯಸ್ಯ' ಎಂಬ ವಾಕ್ಯದಿಂದ ಶಾಸ್ತ್ರಕ್ಕೆ ಅಯಥಾರ್ಥಪ್ರತಿಪಾದಕತ್ವವನ್ನು ಹೇಳಿ, ಅತಿರಿಕ್ತವಾಗಿ ಸತ್ಯ ಎಂಬ ಪಕ್ಷದಲ್ಲಿ 'ಅದ್ವೈತಹಾನೇಃ ಸ್ವರೂಪಾತಿರೇಕೇ' ಎಂಬ ವಾಕ್ಯದಿಂದ ಅದ್ವೈತಹಾನಿಯನ್ನು ಹೇಳಿ, ನಿರ್ವಿಶೇಷಾಭಿನ್ನ ಎಂಬ ಪಕ್ಷದಲ್ಲಿ 'ಅನತಿರೇಕೇ ಸ್ವಪ್ರಕಾಶತ್ವಾತ್' ಎಂಬ ವಾಕ್ಯದಿಂದ ಶಾಸ್ತ್ರಕ್ಕೆ ಸಿದ್ಧಸಾಧನತಾವನ್ನು ಹೇಳಿ, ತದ್ವಿಶೇಷ ಎಂಬ ಪಕ್ಷದಲ್ಲಿ 'ನಿರ್ವಿಶೇಷತ್ವಾದಾತ್ಮನಃ' ಎಂಬ ವಾಕ್ಯದಿಂದ ಅಪಸಿದ್ಧಾಂತವನ್ನು ಹೇಳಿ ಐಕ್ಯವನ್ನು ದೂಷಿಸಲಾಗಿದೆ.

ಈಗಲೂ ಸಹ ಅದೇ ವಿಕಲ್ಪವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅತಿರಿಕ್ತವಾಗಿ ಸತ್ಯ ಎಂಬ ಪಕ್ಷದಲ್ಲಿ ಹಿಂದೆ ಹೇಳಿದ ಅದ್ವೈತಹಾನಿಯನ್ನು ಬಹಿರೇವ ಇಟ್ಟುಕೊಂಡು, ನಿರ್ವಿಶೇಷಾಭಿನ್ನ ಎಂಬ ಪಕ್ಷದಲ್ಲಿ ಹಿಂದೆ ಹೇಳಿದ ಸಿದ್ಧಸಾಧನತಾವನ್ನು ಬಹಿರೇವ ಇಟ್ಟುಕೊಂಡು, ತದ್ವಿಶೇಷ ಎಂಬ ಪಕ್ಷದಲ್ಲಿ ಹಿಂದೆ ಹೇಳಿದ ಅಪಸಿದ್ಧಾಂತವನ್ನು ಬಹಿರೇವ ಇಟ್ಟುಕೊಂಡು, ಅತಿರಿಕ್ತವಾಗಿ ಮಿಥ್ಯಾ ಎಂಬ ಪಕ್ಷದಲ್ಲಿ 'ಮಿಥ್ಯಾತ್ವೇ ಚೈಕ್ಯಸ್ಯ' ಎಂಬ ವಾಕ್ಯದಿಂದ ಆಗಮಕ್ಕೆ ಅತತ್ತ್ವಾವೇದಕತ್ವ ಪ್ರಸಂಗವನ್ನು ಹೇಳಿ ಐಕ್ಯವನ್ನು ದೂಷಿಸುತ್ತೀರಿ.

ಅಲ್ಲಿ ಅತತ್ತ್ವಾವೇದಕತ್ವ ಎಂದರೆ ಅಯಥಾರ್ಥಪ್ರತಿಪಾದಕತ್ವವೇ. ಹಾಗಾಗಿ ದೂಷಣಪ್ರಕಾರಭೇದ ಇಲ್ಲವಾದ್ದರಿಂದ ಪುನರುಕ್ತಿ ಬರುತ್ತದೆ ಎಂಬುದಾಗಿ ಶಂಕೆ ಬಂದರೆ, ಅದಕ್ಕಾಗಿ ಪೂರ್ವೋತ್ತರಸಂದರ್ಭಗಳಲ್ಲಿ ಪರ್ಯವಸಾನಭೇದದಿಂದ ಫಲಭೇದವನ್ನು ತೋರಿಸುವ ಮೂಲಕ ಪುನರುಕ್ತಿಯನ್ನು ಪರಿಹಾರ ಮಾಡುತ್ತಾರೆ -

**ಟೀಕಾ :- ಪೂರ್ವಮನತಿರೇಕಪಕ್ಷಪ್ರತಿಷೇಧೇನಾತಿರೇಕ-ಪಕ್ಷಮಂಗೀಕಾರ್ಯಾಯಥಾರ್ಥಪ್ರತಿಪಾದಕತ್ವಂ ಸಮರ್ಥಿತಮ್ । ಇದಾನೀಂ ತು ತದ್ವಿಪರ್ಯಯೇಣ ವಿಷಯತ್ವಾಭಾವಪ್ರತಿಪಾದನಮಿತಿ ಭೇದಃ ।**

**ಅನುವಾದ:-** ಹಿಂದೆ ಅನ್ಯಥಾಪ್ರತಿಪಾದಕತ್ವ ಎಂದರೆ ಅಯಥಾರ್ಥಪ್ರತಿಪಾದಕತ್ವ ಎಂದು ವಿವಕ್ಷಿಸಿದ್ದರಿಂದ, ಆ ಅಯಥಾರ್ಥಪ್ರತಿಪಾದಕತ್ವಸಿದ್ಧಿಗಾಗಿ ಅಭಿನ್ನ ಎಂಬ ಪಕ್ಷವನ್ನು ಮತ್ತು ಭಿನ್ನವಾದರೂ ಸತ್ಯ ಎಂಬ ಪಕ್ಷವನ್ನು ದೂಷಿಸಿ, ಪರಿಶೇಷತಃ ಭಿನ್ನವಾಗಿ

ಮಿಥ್ಯಾ ಆಗಿದೆ ಎಂದೇ ಹೇಳಬೇಕೆಂದು ಸಮರ್ಥಿಸಿ, (ಒಪ್ಪಿಸಿ) ಶಾಸ್ತ್ರಕ್ಕೆ ಅಯಥಾರ್ಥಪ್ರತಿಪಾದಕತ್ವವನ್ನು ಸಮರ್ಥಿಸಲಾಗಿದೆ.

ಈಗ ಅನ್ಯಥಾಪ್ರತಿಪಾದಕತ್ವ ಎಂದರೆ ವಿಷಯಾದಿರಹಿತತ್ವ ಎಂದು ವಿವಕ್ಷಿಸಿ, ಆ ವಿಷಯಾದಿರಾಹಿತ್ಯಸಿದ್ಧಗಾಗಿ ಭಿನ್ನವಾಗಿದೆ ಎಂಬ ಪಕ್ಷವನ್ನು ಮತ್ತು ಅಭಿನ್ನವಾದರೂ ತದ್ವಿಶೇಷವಾಗಿದೆ ಎಂಬ ಪಕ್ಷವನ್ನೂ ದೂಷಿಸಿ, ಪರಿಶೇಷತಃ ನಿರ್ವಿಶೇಷಾಭಿನ್ನವಾಗಿದೆ ಎಂದೇ ಹೇಳಬೇಕೆಂದು ಸಮರ್ಥಿಸಿ (ಒಪ್ಪಿಸಿ), ಆತ್ಮನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾದಂತೆ ಐಕ್ಯವೂ ನಿತ್ಯಸಿದ್ಧವೇ ಆಗುವುದರಿಂದ ಐಕ್ಯಕ್ಕೆ ವಿಷಯತ್ವ ಕೂಡುವುದಿಲ್ಲ ಎಂಬುದಾಗಿ ವಿಷಯಾದಿರಾಹಿತ್ಯವನ್ನು ಸಮರ್ಥಿಸಲಾಗಿದೆ.

ಈ ರೀತಿಯಾಗಿ ಪರ್ಯವಸಾನಭೇದದಿಂದ ಫಲಭೇದ ಇರುವುದರಿಂದ ಪುನರುಕ್ತಿ ಬರುವುದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ಏವಂ ವಿಷಯಂ ನಿರಾಕೃತ್ಯ ಪ್ರಯೋಜನಂ ನಿರಾಕರೋತಿ -**

**- ಮಾಯಾವಾದಖಂಡನ -**

ಏವಮೇವ ಪ್ರಯೋಜನಮಪಿ ನಿರಸ್ತಮ್ ।

**ಯಥಾ ಅಜ್ಞಾನಾಸಂಭವಾದಜ್ಞಾತಸ್ಯ ವಿಷಯಸ್ಯಾಸಂಭವೋಽದ್ವೈತವಾದೇ, ಏವಮೇವಾಜ್ಞಾನಾಸಂಭವಾದೇವ ಶಾಸ್ತ್ರಸ್ಯ ಪ್ರಯೋಜನಮಪಿ ನಿರಸ್ತಂ ವೇದಿತವ್ಯಮ್ । ಮೋಕ್ಷೋ ಹಿ ಪ್ರಯೋಜನಮ್ । ಸ ಚಾಜ್ಞಾನನಿವೃತ್ತಿರೂಪಃ । ಯದಾಹ - 'ಅವಿದ್ಯಾಸ್ತಮಯೋ ಮೋಕ್ಷಃ ಸಾ ಸಂಸಾರ ಉದಾಹೃತಃ' ಇತಿ । ನ ಚಾಜ್ಞಾನಾಸಂಭವೇ ತನ್ನಿವೃತ್ತಿರುಪಪದ್ಯತೇ ।**

**ಅನುವಾದ :-** ಈ ರೀತಿಯಾಗಿ ವಿಷಯವನ್ನು ನಿರಾಕರಿಸಿ ಪ್ರಯೋಜನವನ್ನೂ ನಿರಾಕರಿಸುತ್ತಾರೆ -

**ಏವಮೇವ ಪ್ರಯೋಜನಮಪಿ ನಿರಸ್ತಮ್ ।** (ಮೂಲ)

ಅಜ್ಞಾನಾಸಂಭವ ನಿಮಿತ್ತದಿಂದಲೇ ಪ್ರಯೋಜನವೂ ನಿರಾಕೃತವಾಯಿತು ಎಂದು ಮೂಲಾರ್ಥ.

ಯಾವ ರೀತಿಯಾಗಿ ಅಜ್ಞಾನ ಕೂಡುವುದಿಲ್ಲವಾದ್ದರಿಂದ ಅಜ್ಞಾತವಾದ ವಿಷಯವು ಕೂಡುವುದಿಲ್ಲವೋ ಅದೇ ರೀತಿಯಾಗಿ ಅಜ್ಞಾನ ಕೂಡುವುದಿಲ್ಲವಾದ್ದರಿಂದಲೇ ಶಾಸ್ತ್ರಕ್ಕೆ ಪ್ರಯೋಜನವೂ ನಿರಾಕೃತವಾಯಿತೆಂದು ತಿಳಿಯಬೇಕು.

ಯಾಕೆ ? ಅಜ್ಞಾನ ಕೂಡದಿದ್ದರೆ ಪ್ರಯೋಜನ ಏಕೆ ಕೂಡುವುದಿಲ್ಲ ? ಎಂದರೆ, ಮೋಕ್ಷವೇ ಶಾಸ್ತ್ರಕ್ಕೆ ಪ್ರಯೋಜನ. ಆ ಮೋಕ್ಷವಾದರೂ ಅಜ್ಞಾನನಿವೃತ್ತಿರೂಪವಾಗಿದೆ. ಅದನ್ನು ಶಾಸ್ತ್ರದಲ್ಲಿ ಹೇಳಿದ್ದಾರೆ -

'ಅವಿದ್ಯಾಸ್ತಮಯೋ ಮೋಕ್ಷಃ ಸಾ ಸಂಸಾರ ಉದಾಹೃತಃ ।' (ಅವಿದ್ಯೆಯೇ ಸಂಸಾರ, ಅವಿದ್ಯಾನಿವೃತ್ತಿಯೇ ಮೋಕ್ಷ ಎಂಬುದಾಗಿ ಉದಾಹೃತವಾಗಿದೆ.)

ಪ್ರತಿಯೋಗಿ ಇಲ್ಲದಿದ್ದರೆ ಅದರ (ಪ್ರಧ್ವಂಸವು) ನಿವೃತ್ತಿಯು ಕೂಡುವುದಿಲ್ಲವಾದ್ದರಿಂದ, ಪ್ರಕೃತ ಪ್ರತಿಯೋಗಿಯಾದ ಅಜ್ಞಾನವು ಕೂಡುವುದಿಲ್ಲವಾದ್ದರಿಂದ ಆ ಅಜ್ಞಾನದ ನಿವೃತ್ತಿಯು (ಮೋಕ್ಷವು) ಉಪಪನ್ನವಾಗುವುದಿಲ್ಲ. ಆದ್ದರಿಂದ ಶಾಸ್ತ್ರಕ್ಕೆ ಪ್ರಯೋಜನವೂ ನಿರಾಕೃತವಾದಂತಾಯಿತು.

**ಟೀಕಾ :- ನನ್ವೇತತ್ 'ಅಜ್ಞಾನಾಸಂಭವಾದೇವ' ಇತ್ಯನೇನೈವ ವಾಕ್ಯೇನ ಸಿದ್ಧಮ್ । ತತ್ಕಿಮರ್ಥೋಽಯಂ ಗ್ರಂಥಃ ? ಸತ್ಯಂ, ತಥಾಪಿ ತಸ್ಯೈವ ಪ್ರಪಂಚೋಽಯಮಿತ್ಯದೋಷಃ । ಪ್ರಪಂಚನಂ ಚ ಪ್ರಕಾರಾಂತರೇಣ ಪ್ರಯೋಜನನಿರಾಸಪ್ರಸ್ತಾವಾಯೇತಿ ।**

**ಅನುವಾದ :-** ಅಜ್ಞಾನ ಕೂಡುವುದಿಲ್ಲವಾದ್ದರಿಂದ ಪ್ರಯೋಜನವೂ ನಿರಾಕೃತವಾಯಿತು ಎನ್ನುವುದು 'ಅಜ್ಞಾನಾಸಂಭವಾದೇವ ತನ್ಮತಮಖಿಲ-ಮಪಾಕೃತಮ್' ಎಂಬ ಹಿಂದಿನ ವಾಕ್ಯದಿಂದಲೇ ಸಿದ್ಧವಾಗಿದೆ. ಅಂದಮೇಲೆ ಈ ಗ್ರಂಥ ಮತ್ತೇಕೆ ಬೇಕು ?

ಸತ್ಯವೇ. ಆದರೂ ಸಹ ಆ ಹಿಂದಿನ ವಾಕ್ಯದಲ್ಲಿ ಮಾಡಿದ ನಿರಾಕರಣೆಯ ವಿಸ್ತಾರವೇ ಇದು. ಆದ್ದರಿಂದ ವೈಯರ್ಥ್ಯದೋಷ ಇಲ್ಲ. ವಿಸ್ತಾರ ಮಾಡುವುದಾದರೂ ಏಕೆ ? ಎಂದರೆ, ಮತ್ತೊಂದು ರೀತಿಯಿಂದಲೂ ಪ್ರಯೋಜನನಿರಾಕರಣೆ ಮಾಡಲು ಬರುತ್ತದೆ ಎಂದು ತೋರಿಸುವುದಕ್ಕಾಗಿ.

**ಟೀಕಾ :- ಪ್ರಕಾರಾಂತರೇಣ ಪ್ರಯೋಜನಂ ನಿರಾಕರೋತಿ -**

## - ಮಾಯಾವಾದಖಂಡನ -

ಸ್ವರೂಪತ್ವಾನ್ಮೋಕ್ಷಸ್ಯ ಪೂರ್ವಮೇವ ಸಿದ್ಧತ್ವಾತ್ ।

**ಪ್ರಯೋಜನಂ ನಿರಸ್ತಮಿತಿ ಸಂಬಂಧಃ । ಅಜ್ಞಾನನಿವೃತ್ತಿಲಕ್ಷಣೋ ಹಿ ಮೋಕ್ಷಃ ಪರೇಣಾತ್ಮಸ್ವರೂಪತಯೈವೇಷ್ಟಃ । ಯಥಾಽಽಹ ''ಆತ್ಮೈವಾಜ್ಞಾನಹಾನಿಃ'' ಇತಿ । ಆತ್ಮಸ್ವರೂಪಂ ಚ ಪ್ರಾಗೇವ ಶಾಸ್ತ್ರಪ್ರವೃತ್ತೇಃ ಸಿದ್ಧಮೇವೇತಿ ಕಥಂ ತತ್ ಪ್ರಯೋಜನಂ ಸ್ಯಾತ್ ? ನ ಹಿ ಕಶ್ಚಿತ್ಸಿದ್ಧಸ್ಯ ಸಾಧನಾಯ ಯತತೇ । ನಾಪಿ ತತ್ ಸಾಧನಾರ್ಹಮ್ ।**

**ಅನುವಾದ :-** ಮತ್ತೊಂದು ರೀತಿಯಿಂದಲೂ ಪ್ರಯೋಜನವನ್ನು ನಿರಾಕರಿಸುತ್ತಾರೆ-

**ಸ್ವರೂಪತ್ವಾನ್ಮೋಕ್ಷಸ್ಯ ಪೂರ್ವಮೇವ ಸಿದ್ಧತ್ವಾತ್ ।** (ಮೂಲ)

ಅಜ್ಞಾನನಿವೃತ್ತಿರೂಪವಾದ ಮೋಕ್ಷವು ಆತ್ಮಸ್ವರೂಪವಾದ್ದರಿಂದ ಶಾಸ್ತ್ರಪ್ರವೃತ್ತಿಗಿಂತಲೂ ಪೂರ್ವದಲ್ಲೇ ಸಿದ್ಧವಾದ ಅದು ಪ್ರಯೋಜನವಾಗಲಾರದು ಎಂದು ಮೂಲಾರ್ಥ.

ಮೂಲದಲ್ಲಿರುವ ಸಿದ್ಧತ್ವಾತ್ ಎಂಬ ಪದಕ್ಕೆ 'ಪ್ರಯೋಜನಂ ನಿರಸ್ತಂ' ಎಂಬ ಹಿಂದಿನ ವಾಕ್ಯಗಳಲ್ಲಿರುವ ಪದಗಳೊಂದಿಗೆ (ಸಂಬಂಧ) ಅನ್ವಯ ಮಾಡಿಕೊಳ್ಳಬೇಕು. ಅಜ್ಞಾನನಿವೃತ್ತಿರೂಪವಾದ ಮೋಕ್ಷವು ಆತ್ಮಸ್ವರೂಪವೇ ಆಗಿದೆ ಎಂದು ಪರರಿಗೆ ಸಮ್ಮತವಾಗಿದೆ.

''ಆತ್ಮೈವಾಜ್ಞಾನಹಾನಿಃ''

'ಅಜ್ಞಾನಹಾನಿರೂಪವಾದ ಮೋಕ್ಷವು ಆತ್ಮವೇ (ಆತ್ಮಸ್ವರೂಪವೇ) ಆಗಿದೆ'

ಎಂಬ ಅವರ ಮಾತಿನಲ್ಲಿ ಈ ಅಭಿಪ್ರಾಯ ಸ್ಫುಟವಾಗಿದೆ. ಆ ಆತ್ಮಸ್ವರೂಪವಾದರೋ ಶಾಸ್ತ್ರಪ್ರವೃತ್ತಿಗಿಂತಲೂ ಪೂರ್ವದಲ್ಲಿಯೇ ಸಿದ್ಧವಾಗಿದೆಯಾದ್ದರಿಂದ, ಅಂತಹ ಆತ್ಮಸ್ವರೂಪಭೂತವಾದ ಮೋಕ್ಷವೂ ಸಿದ್ಧವೇ ಆಗಿದೆ. ಹಾಗೆ ಸಿದ್ಧವೇ ಆಗಿರುವ ಮೋಕ್ಷವು ಹೇಗೆತಾನೇ ಪ್ರಯೋಜನವಾಗಲು ಸಾಧ್ಯ ? ಯಾವ ಒಬ್ಬ ವ್ಯಕ್ತಿಯೂ ಸಿದ್ಧವಾದದ್ದನ್ನು ಸಾಧಿಸುವುದಕ್ಕಾಗಿ ಪ್ರಯತ್ನ ಮಾಡುವುದಿಲ್ಲ. ಮತ್ತು ಅಂತಹ ಸಿದ್ಧವಾದದ್ದು ಸಾಧನೆಗೆ ಅರ್ಹವೂ ಅಲ್ಲ.

**ವಿವರಣೆ :**

''ಆತ್ಮೈವಾಜ್ಞಾನಹಾನಿಃ ಇತಿ ।''

ಅಧಿಕರಣಾತಿರಿಕ್ತವಾಗಿ ಅಭಾವ ಇಲ್ಲ ಎಂದು ಭಾಟ್ಟರ ಸಿದ್ಧಾಂತವಾಗಿದೆ. ''ವ್ಯವಹಾರೇ ಭಟ್ಟನಯಃ'' ಎಂದು ಒಪ್ಪಿದ ಮಾಯಾವಾದಿಗಳಿಗೂ ಇದು ಸಮ್ಮತ. ಪ್ರಕೃತ ಅಜ್ಞಾನಾಧಿಕರಣನಾದ ಆತ್ಮನಲ್ಲಿಯೇ ಅಜ್ಞಾನನಿವೃತ್ತಿ ಇರುವುದು ಉಚಿತ. ಈ ಅಜ್ಞಾನನಿವೃತ್ತಿಯು ಅಭಾವವಾದ್ದರಿಂದ (ಪ್ರಧ್ವಂಸಾಭಾವವಾದ್ದರಿಂದ) ಇದೂ ಸಹ ಅಧಿಕರಣನಾದ ಆತ್ಮನ ಸ್ವರೂಪವೇ ಆಗಿದೆ ಎಂದು ಮಾಯಾವಾದಿಗಳು ಒಪ್ಪಿದ್ದಾರೆ ಎಂದು ಅಭಿಪ್ರಾಯ.

ಆದ್ದರಿಂದ ಅಜ್ಞಾನ ಕೂಡುವುದಿಲ್ಲವಾದ್ದರಿಂದ ಹಾಗೂ ಅಜ್ಞಾನನಿವೃತ್ತಿರೂಪ-ಮೋಕ್ಷವು ಆತ್ಮಸ್ವರೂಪವಾಗಿ ಸಿದ್ಧವೇ ಆಗಿರುವುದರಿಂದಲೂ ಸಹ ಅಜ್ಞಾನನಿವೃತ್ತಿರೂಪ ಮೋಕ್ಷವು ಶಾಸ್ತ್ರಕ್ಕೆ ಪ್ರಯೋಜನವಾಗುವುದಿಲ್ಲ.

**ಟೀಕಾ :- 'ಜ್ಞಾತ ಆತ್ಮೈವಾಜ್ಞಾನಹಾನಿರ್ನಾತ್ಮಮಾತ್ರಮ್' ಇತಿ ಕಶ್ಚಿತ್ । ತದಸತ್ । ಆತ್ಮನೋ ಜ್ಞಾನಕರ್ಮತಾನಂಗೀಕಾರಾತ್ । ವೃತ್ತಿವಿಷಯತಾಽಸ್ತೀತಿ ಚೇತ್ । ತಥಾಪಿ ವೃತ್ತಿವಿಶಿಷ್ಟ ಆತ್ಮಾ ಮೋಕ್ಷ ಇತ್ಯುಕ್ತಂ ಸ್ಯಾತ್ । ತಥಾ ಚ ವೃತ್ತೇರ್ನಿವೃತ್ತೌ ಮೋಕ್ಷನಿವೃತ್ತಿಪ್ರಸಂಗಃ । ವೃತ್ತ್ಯುಪಲಕ್ಷಿತ ಆತ್ಮಾ ಮೋಕ್ಷ ಇತಿ ಚೇತ್, ತಥಾಪಿ ಜೀವನ್ಮುಕ್ತೌ ಪ್ರಸಂಗ ಇತ್ಯೇಷಾ ದಿಕ್ ।**

**ಅನುವಾದ :-** ''ಅಜ್ಞಾನನಿವೃತ್ತಿಯು ಕೇವಲ ಆತ್ಮಸ್ವರೂಪ ಅಲ್ಲ. ಕಿಂತು ಜ್ಞಾತಾತ್ಮಸ್ವರೂಪವಾಗಿದೆ. ಹಾಗಾಗಿ ಶಾಸ್ತ್ರಪ್ರವೃತ್ತಿಗಿಂತಲೂ ಮೊದಲು ಆತ್ಮನಲ್ಲಿ ಜ್ಞಾತತ್ತ್ವವು ಅಸಿದ್ಧವಾದ್ದರಿಂದ ಆತ್ಮನ ಜ್ಞಾನಕ್ಕಾಗಿ (ಆತ್ಮನು ಜ್ಞಾತನಾಗುವುದಕ್ಕಾಗಿ) ಶಾಸ್ತ್ರಪ್ರವೃತ್ತಿಯು ಉಪಪನ್ನವಾಗುತ್ತದೆ'' ಎಂಬುದಾಗಿ ಕೆಲವರು ಅಭಿಪ್ರಾಯಪಡುತ್ತಾರೆ.

ಆದರೆ ಆ ಅಭಿಪ್ರಾಯ ಸರಿಯಲ್ಲ. ಕಾರಣ - ಆತ್ಮನಿಗೆ ಜ್ಞಾನಕರ್ಮತ್ವವನ್ನೇ (ಚೈತನ್ಯಜ್ಞಾನವಿಷಯತ್ವವನ್ನೇ = ಕರ್ತೃಕರ್ಮವಿರೋಧ ಬರುವ ಕಾರಣ ವೃತ್ತಿಪ್ರತಿಬಿಂಬಿತಚೈತನ್ಯಾಭಿವ್ಯಕ್ತಾಧಿಷ್ಠಾನಚೈತನ್ಯರೂಪಜ್ಞಾನವಿಷಯತ್ವವನ್ನೇ) ಒಪ್ಪಿಲ್ಲವಾದ್ದರಿಂದ.

ಆತ್ಮನಿಗೆ ಚೈತನ್ಯಜ್ಞಾನವಿಷಯತ್ವ ಇಲ್ಲದಿದ್ದರೂ ವೇದಾಂತಜನ್ಯವೃತ್ತಿರೂಪಜ್ಞಾನ-ವಿಷಯತ್ವ ಇದೆಯಲ್ಲ? ಎಂದರೆ, ಆಗ ವೃತ್ತಿವಿಶಿಷ್ಟ ಆತ್ಮಸ್ವರೂಪವಾಗಿದೆ ಮೋಕ್ಷ ಎಂದು ಹೇಳಿದಂತಾಗುತ್ತದೆ. ಹಾಗಾದರೆ ವಿಶೇಷಣನಿವೃತ್ತಿಯಾದಾಗ ವಿಶಿಷ್ಟನಿವೃತ್ತಿನಿಯಮ ಇರುವುದರಿಂದ ವೃತ್ತಿಯು ನಿವೃತ್ತಿಯಾದಾಗ ಮೋಕ್ಷವೂ ನಿವೃತ್ತವಾಗಬೇಕಾದ ಅತಿಪ್ರಸಂಗ ಬರುತ್ತದೆ.

ಮೋಕ್ಷವು ವೃತ್ತಿವಿಶಿಷ್ಟಆತ್ಮಸ್ವರೂಪ ಎಂದು ಹೇಳುವುದಿಲ್ಲ. ಕಿಂತು ವೃತ್ತ್ಯುಪಲಕ್ಷಿತ ಆತ್ಮಸ್ವರೂಪ ಎಂದು ಹೇಳುತ್ತೇವೆ. ಆಗ ಕಾಕವು ನಿವೃತ್ತವಾದರೂ ಗೃಹ ನಿವೃತ್ತವಾಗುವುದಿಲ್ಲವಾದ್ದರಿಂದ, ಉಪಲಕ್ಷಣನಿವೃತ್ತಿಯಾದಾಗ ಉಪಲಕ್ಷಿತನಿವೃತ್ತಿ-ಯಾಗಬೇಕಾದ ನಿಯಮವಿಲ್ಲ. ಆದ್ದರಿಂದ ಮೋಕ್ಷವು ವೃತ್ತ್ಯುಪಲಕ್ಷಿತ ಆತ್ಮಸ್ವರೂಪ ಎಂದು ಹೇಳುತ್ತೇವೆ ಎಂದು ಶಂಕಿಸಿದರೆ, ಆಗಲೂ ಸಹ ಜೀವನ್ಮುಕ್ತ್ಯವಸ್ಥೆಯಲ್ಲಿ ಅತಿಪ್ರಸಂಗ ಬಂದೇ ಬರುತ್ತದೆಯಾದ್ದರಿಂದ ಈ ವಾದವೂ ಸಮಂಜಸವಲ್ಲ.

**ವಿವರಣೆ :-** ಮೋಕ್ಷವು ವೃತ್ತ್ಯುಪಲಕ್ಷಿತ ಆತ್ಮಸ್ವರೂಪ ಎಂದು ಹೇಳುವುದಾದರೆ ತತ್ತ್ವವಿಷಯಕಾಪರೋಕ್ಷವೃತ್ತ್ಯುಪಲಕ್ಷಿತನಾದ ಆತ್ಮನು ಜೀವನ್ಮುಕ್ತ್ಯವಸ್ಥೆಯಲ್ಲಿಯೂ ಇರುವುದರಿಂದ ಜೀವನ್ಮುಕ್ತ್ಯವಸ್ಥೆಯಲ್ಲಿಯೂ ಅಜ್ಞಾನನಿವೃತ್ತಿಯಾಗಬೇಕಾದ ಅತಿಪ್ರಸಂಗ ಬರುತ್ತದೆ.

ಜೀವನ್ಮುಕ್ತ್ಯವಸ್ಥೆಯಲ್ಲಿ ಅಜ್ಞಾನನಿವೃತ್ತಿಯಾಗಲಿ ಎಂದು ಇಷ್ಟಾಪತ್ತಿ ಹೇಳಲು ಬರುವುದಿಲ್ಲ. ಕಾರಣ ಹಾಗಾದರೆ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿ ಆಗದೇಹೋಗಬೇಕಾದ ಪ್ರಸಂಗ ಬರುತ್ತದೆ. ಅವಿದ್ಯಾ ನಿವೃತ್ತವಾದರೂ ಅವಿದ್ಯಾಲೇಶ ಇರುವುದರಿಂದ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿ ಕೂಡುತ್ತದೆ ಎನ್ನಲು ಬರುವುದಿಲ್ಲ. ಕಾರಣ ಅವಿದ್ಯಾ ನಿರಂಶವಾಗಿದೆ.

ಸಾಂಶವಾದರೂ, ಅವಿದ್ಯೆಯ ಆ ಅಂಶ ಅಜ್ಞಾನಕಾರ್ಯವೋ ? ಅಲ್ಲವೋ ? ಅಜ್ಞಾನಕಾರ್ಯ ಅಲ್ಲ ಎಂದರೆ ಬ್ರಹ್ಮನಂತೆ ಸತ್ಯವಾಗಬೇಕಾಗುತ್ತದೆಯಾದ್ದರಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ಇನ್ನು ಅಜ್ಞಾನಕಾರ್ಯ ಎನ್ನುವುದಾದರೆ, ಉಪಾದಾನನಿವೃತ್ತಿಯಾದಾಗ ಉಪಾದೇಯದ ಅವಸ್ಥಾನ (ಇರುವಿಕೆ) ಕಂಡಿಲ್ಲವಾದ್ದರಿಂದ ಅಜ್ಞಾನನಿವೃತ್ತಿಯಾದಾಗ ಆ ಅಂಶದ ಅವಸ್ಥಾನ (ಇರುವಿಕೆ) ಉಪಪನ್ನವಾಗುವುದಿಲ್ಲ.

ಅವಿದ್ಯಾ ನಿವೃತ್ತವಾದರೂ ಅವಿದ್ಯಾಸಂಸ್ಕಾರದಿಂದಾಗಿ ಪ್ರವೃತ್ತಿ ಕೂಡುತ್ತದೆ ಎನ್ನುವುದೂ ಸರಿಯಲ್ಲ. ಕಾರಣ ಆ ಅವಿದ್ಯಾಸಂಸ್ಕಾರವೂ ಅಜ್ಞಾನಕಾರ್ಯವೋ ? ಅಲ್ಲವೋ ? ಇತ್ಯಾದಿಯಾಗಿ ಹಿಂದಿನ ದೋಷಗಳು ಪ್ರಸಕ್ತವಾಗುವುದರಿಂದ ಅದೂ ಸರಿಯಲ್ಲ. ಆದ್ದರಿಂದ ಜೀವನ್ಮುಕ್ತ್ಯವಸ್ಥೆಯಲ್ಲಿ ಅತಿಪ್ರಸಂಗ ಬಂದೇ ಬರುವುದರಿಂದ ಕೆಲವರ ಈ ವಾದ ಸರಿಯಾದದ್ದಲ್ಲ ಎನ್ನುವುದು ದಿಕ್ ಶಬ್ದಾರ್ಥವಾಗಿದೆ.

**ಅವತಾರಿಕೆ :-** ಈ ರೀತಿಯಾಗಿ 'ಇಷ್ಟಸಿದ್ಧಿ'ಕಾರರ ಮತಾನುಸಾರಿಯಾದ 'ತತ್ತ್ವಪ್ರದೀಪಿಕಾ'ಕಾರರೇ ಮೊದಲಾದವರ ಮತವನ್ನು ನಿರಾಕರಿಸಿ, ಪ್ರಕೃತದಲ್ಲಿ 'ಆನಂದಬೋಧ'ಕಾರರೇ ಮೊದಲಾದವರ ಮತವನ್ನು ನಿರಾಕರಿಸುವ ಪರವಾಗಿ ಮುಂದಿನ ಮೂಲಗ್ರಂಥವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ಶಂಕೆ ಮಾಡಿಕೊಳ್ಳುತ್ತಾರೆ-

**ಟೀಕಾ :- ಅಪರ ಆಹ - ನಾವಿದ್ಯಾಸ್ತಮಯಲಕ್ಷಣಂ ಮೋಕ್ಷಮಾತ್ಮಸ್ವರೂಪಮಾಚಕ್ಷ್ಮಹೇ । ಕಿಂ ನಾಮ ? ಅನ್ಯಮೇವ । ನ ಚ ವಾಚ್ಯಂ ತಸ್ಯ ಸತ್ತ್ವೇ ಅದ್ವೈತಹಾನಿಃ, ಅಸತ್ತ್ವೇ ತದಭಾವಃ, ಸದಸತ್ತ್ವಂ ವಿರುದ್ಧಂ, ಸದಸದ್ವಿಲಕ್ಷಣತ್ವೇಽಜ್ಞಾನನಿವೃತ್ತಿತ್ವಾನುಪಪತ್ತಿಃ[23], ಪ್ರತಿಯೋಗಿತನ್ನಿವೃತ್ತ್ಯೋರ್ವೈಲಕ್ಷಣ್ಯಸ್ಯಾವಶ್ಯಕತ್ವಾದಿತಿ । [24]ಪಂಚಮಪ್ರಕಾರತ್ವಾಭ್ಯುಪಗಮಾತ್ । ಯಥೋಕ್ತಂ -**

**ನ ಸನ್ನಾಸನ್ನ ಸದಸನ್ನಾನಿರ್ವಾಚ್ಯಶ್ಚ ತತ್ಕ್ಷಯಃ[25] ।**
**[26]ಯಕ್ಷಾನುರೂಪೋ ಬಲಿರಿತ್ಯಾಚಾರ್ಯಾಃ [27]ಪ್ರತ್ಯಪೀಪದನ್ ॥ ಇತಿ ॥**

---

23) ಅಜ್ಞಾನನಿವೃತ್ತೇಃ ಸದಸದ್ವೈಲಕ್ಷಣ್ಯಾಂಗೀಕಾರೇ ಅಜ್ಞಾನಸ್ಯಾಪಿ ಸದಸದ್ವಿಲಕ್ಷಣತ್ವಾಂಗೀಕಾರೇಣಾಜ್ಞಾನತನ್ನಿವೃತ್ತ್ಯೋಃ ತ್ವನ್ಮತೇ ಸದಸದ್ವೈಲಕ್ಷಣ್ಯಾ(ಸಾಲಕ್ಷಣ್ಯಾ)ನುಪಪತ್ತಿರಿತ್ಯರ್ಥಃ । (ಶ್ರೀನಿ)

24) ಸದಸದ್ವಿಲಕ್ಷಣವಿಲಕ್ಷಣತ್ವಾಭ್ಯುಪಗಮಾದಿತ್ಯರ್ಥಃ । (ಶ್ರೀನಿ)

25) ತತ್ಕ್ಷಯಃ ಅವಿದ್ಯಾಕ್ಷಯಃ ।

26) ಲೋಕೇ ಭಾವಪದಾರ್ಥಸ್ಯ ನಿವೃತ್ತಿರಭಾವಃ, ಅಭಾವಸ್ಯ ನಿವೃತ್ತಿರ್ಭಾವಃ । ಪ್ರತಿಯೋಗ್ಯಾಪತ್ತೇರೇವ ಅಭಾವನಿವರ್ತಕತ್ವಸ್ಯ ಪ್ರಾಗಭಾವೇ ದೃಷ್ಟತ್ವಾತ್ । ಭಾವಾಭಾವವಿಲಕ್ಷಣಸ್ಯಾಜ್ಞಾನಸ್ಯ ನಿವೃತ್ತಿಃ 'ಯಾದೃಶೋ ಯಕ್ಷಃ ತಾದೃಶೋ ಬಲಿಃ' ಇತಿ ನ್ಯಾಯೇನ ಪಂಚಮಪ್ರಕಾರ ಇತ್ಯರ್ಥಃ । ಯಕ್ಷಸ್ಯಾಲ್ಪತ್ವೇ ತದ್ಬಲೇರಪಿ ಅಲ್ಪತ್ವಂ, ತಸ್ಯ ಮಹತ್ತ್ವೇ ತದ್ಬಲೇರಪಿ ಮಹತ್ತ್ವಂ ದೃಷ್ಟಮ್ । ತದ್ವತ್ ಮಹಾಯಕ್ಷಸ್ಥಾನೀಯಾಜ್ಞಾನನಿವೃತ್ತೇಃ ಪಂಚಮಪ್ರಕಾರತ್ವರೂಪೋ ಮಹಾಬಲಿರ್ದೀಯತ ಇತಿ ಭಾವಃ ॥ (ಶ್ರೀನಿ)

27) ಪ್ರತ್ಯಪೀಪದನ್ ಪ್ರತಿಪಾದಿತವಂತಃ । (ಶ್ರೀನಿ)

**ಅನುವಾದ :-** ಕೆಲವರು ಹೇಳುತ್ತಾರೆ - ಅವಿದ್ಯಾನಿವೃತ್ತಿರೂಪವಾದ ಮೋಕ್ಷವನ್ನು ಆತ್ಮಸ್ವರೂಪ ಎಂದು ನಾವು ಹೇಳುವುದಿಲ್ಲ. ಕಿಂತು ಆತ್ಮಸ್ವರೂಪದಿಂದ ಭಿನ್ನ ಎಂದೇ ಹೇಳುತ್ತೇವೆ.

ಆತ್ಮಸ್ವರೂಪದಿಂದ ಭಿನ್ನ ಎನ್ನುವುದಾದರೆ ಸತ್ ಎನ್ನುತ್ತೀರೋ ? ಅಸತ್ ಎನ್ನುತ್ತೀರೋ ? ಸದಸತ್ ಎನ್ನುತ್ತೀರೋ ? ಸದಸದ್ವಿಲಕ್ಷಣ ಎನ್ನುತ್ತೀರೋ ?

ಸತ್ ಎನ್ನುವುದಾದರೆ ಅದ್ವೈತಹಾನಿ ಬರುತ್ತದೆ. ಶಶಶೃಂಗದಂತೆ ಅತ್ಯಂತಅಸತ್ ಎನ್ನುವುದಾದರೆ ಮೋಕ್ಷವು ಸ್ವರೂಪದಿಂದಲೇ (ಸ್ವರೂಪತ ಏವ) ಇಲ್ಲ ಎಂದಾಗುತ್ತದೆ. ಸದಸತ್ ಎಂದು ಹೇಳುವುದು (ಸತ್ವವೂ ಇದೆ, ಅಸತ್ವವೂ ಇದೆ ಎಂದು ಹೇಳುವುದು) ವಿರುದ್ಧವಾಗುತ್ತದೆ. ಇನ್ನು ಸದಸದ್ವಿಲಕ್ಷಣ ಎನ್ನುವುದಾದರೆ, ಪ್ರತಿಯೋಗಿ-ತನ್ನಿವೃತ್ತಿಗಳಲ್ಲಿ ವೈಲಕ್ಷಣ್ಯವು ಆವಶ್ಯಕವಾದ್ದರಿಂದ, ಅಜ್ಞಾನನಿವೃತ್ತಿಗೆ ಸದಸದ್ವೈಲಕ್ಷಣ್ಯವನ್ನು ಅಂಗೀಕರಿಸುವುದಾದರೆ ನೀವು ಪ್ರತಿಯೋಗಿಯಾಗಿರುವ ಅಜ್ಞಾನಕ್ಕೂ ಸದಸದ್ವೈಲಕ್ಷಣ್ಯವನ್ನು ಅಂಗೀಕಾರ ಮಾಡಿರುವುದರಿಂದ ಅಜ್ಞಾನ-ತನ್ನಿವೃತ್ತಿ ಎರಡಕ್ಕೂ ಸದಸದ್ವೈಲಕ್ಷಣ್ಯವು ನಿಮ್ಮ ಮತದಲ್ಲಿ ಉಪಪನ್ನವಾಗುವುದಿಲ್ಲ. ಆದ್ದರಿಂದ ಸತ್-ಅಸತ್-ಸದಸತ್-ಸದಸದ್ವಿಲಕ್ಷಣ ಎಂಬ ಯಾವ ಪಕ್ಷವೂ ಸಮಂಜಸವಾಗುವುದಿಲ್ಲವಲ್ಲ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಕಾರಣ ಅಜ್ಞಾನನಿವೃತ್ತಿರೂಪವಾದ ಮೋಕ್ಷವನ್ನು ನಾವು ಸತ್-ಅಸತ್-ಸದಸತ್-ಸದಸದ್ವಿಲಕ್ಷಣ ಎಂದು ಹೇಳುವುದೇ ಇಲ್ಲ. ಕಿಂತು ಸದಸದ್ವಿಲಕ್ಷಣವಿಲಕ್ಷಣವಾಗಿದೆ ಎಂಬುದಾಗಿ ಮೋಕ್ಷಕ್ಕೆ ಪಂಚಮಪ್ರಕಾರತ್ವವನ್ನು ಹೇಳುತ್ತೇವೆ. ಅದನ್ನು ಹೇಳಿದ್ದಾರೆ -

**ನ ಸನ್ನಾಸನ್ನ ಸದಸನ್ನಾನಿರ್ವಾಚ್ಯಶ್ಚ ತತ್ಕ್ಷಯಃ ।**
**ಯಕ್ಷಾನುರೂಪೋ ಬಲಿರಿತ್ಯಾಚಾರ್ಯಾಃ ಪ್ರತ್ಯಪೀದನ್ ॥**

**ಶ್ಲೋಕಾರ್ಥ :-** ತತ್ಕ್ಷಯಃ = ಅವಿದ್ಯಾನಿವೃತ್ತಿಯು ನ ಸನ್ = ಸತ್ ಅಲ್ಲ. ನ ಅಸನ್ = ಅಸತ್ ಅಲ್ಲ. ನ ಸದಸನ್ = ಸದಸತ್ ಅಲ್ಲ. ನ ಅನಿರ್ವಾಚ್ಯಶ್ಚ = ಅನಿರ್ವಾಚ್ಯವೂ (ಸದಸದ್ವಿಲಕ್ಷಣವೂ) ಅಲ್ಲ. ಯಕ್ಷಾನುರೂಪೋ ಬಲಿಃ = ಲೋಕದಲ್ಲಿ ಭಾವಪದಾರ್ಥದ ನಿವೃತ್ತಿ ಅಭಾವ, ಅಭಾವದ ನಿವೃತ್ತಿ ಭಾವ. ಯಾಕೆ ? ಪ್ರತಿಯೋಗ್ಯಾಪತ್ತಿಯೇ ಅಭಾವನಿವರ್ತಕವಾಗುವುದು ಪ್ರಾಗಭಾವದಲ್ಲಿ ಕಂಡಿದ್ದರಿಂದ. ಪ್ರಕೃತ ಭಾವಾಭಾವವಿಲಕ್ಷಣವಾದ ಅಜ್ಞಾನನಿವೃತ್ತಿಯು ''ಯಾದೃಶೋ ಯಕ್ಷಃ

ತಾದೃಶೋ ಬಲಿಃ'' ಎಂಬ ನ್ಯಾಯದಿಂದ ಪಂಚಮಪ್ರಕಾರವಾಗಿದೆ. ಯಕ್ಷ ಅಲ್ಪವಾಗಿದ್ದರೆ ಅದರ ಬಲಿಯೂ ಅಲ್ಪವಾಗಿರುತ್ತದೆ. ಯಕ್ಷ ಮಹತ್ ಆಗಿದ್ದರೆ ಅದರ ಬಲಿಯೂ ಮಹತ್ ಆಗಿರುತ್ತದೆ ಎಂಬುದಾಗಿ ಕಂಡಿದೆ. ಅದರಂತೆ ಮಹಾಯಕ್ಷಸ್ಥಾನೀಯವಾದ ಅಜ್ಞಾನಿವೃತ್ತಿಗೆ ಪಂಚಮಪ್ರಕಾರತ್ವರೂಪವಾದ ಮಹಾಬಲಿ ಕೊಡಲಾಗುತ್ತದೆ ಇತಿ = ಎಂಬುದಾಗಿ ಆಚಾರ್ಯಾಃ =ಆಚಾರ್ಯರು ಪ್ರತ್ಯಪೀಪದನ್ = ಪ್ರತಿಪಾದನೆ ಮಾಡಿದ್ದಾರೆ.

ಆದ್ದರಿಂದ ಅವಿದ್ಯಾನಿವೃತ್ತಿರೂಪವಾದ ಮೋಕ್ಷವು ಆತ್ಮಸ್ವರೂಪ ಅಲ್ಲ. ಕಿಂತು ಆತ್ಮಸ್ವರೂಪದಿಂದ ಭಿನ್ನವಾಗಿ ಸದಸದ್ವಿಲಕ್ಷಣವಿಲಕ್ಷಣವಾಗಿದೆ ಎಂಬುದಾಗಿ ''ಆನಂದಬೋಧ''ಕಾರರೇ ಮೊದಲಾದವರು ಅಭಿಪ್ರಾಯಪಡುತ್ತಾರೆ.

**ಅವತಾರಿಕೆ :-** ಈ ರೀತಿಯಾದ ವಾದವನ್ನು ನಿರಾಕರಿಸುತ್ತಾರೆ -

**ಟೀಕಾ :- ತತ್ರಾಹ -**

**- ಮಾಯಾವಾದಖಂಡನ -**

**ಅಜ್ಞಾನಾಸಂಭವೇನ ಚತುರ್ಥಪ್ರಕಾರಾಭಾವಾತ್ ಪಂಚಮಪ್ರಕಾರತಾಽಪಿ ನಿರಸ್ತಾ ।**

**ಮೋಕ್ಷಸ್ಯೇತ್ಯನುವರ್ತತೇ । ಅಜ್ಞಾನಸ್ಯ ಹಿ ನ ಸತ್ವಮದ್ವೈತಭಂಗಾತ್ । ನಾಪ್ಯಸತ್ವಂ[28] ಪ್ರತೀತಿವಿರೋಧಾತ್ । ನ ಚ ಸದಸತ್ವಂ ವಿರೋಧಾತ್ । ಅತಶ್ಚತುರ್ಥಪ್ರಕಾರೋಽನಿರ್ವಚನೀಯತ್ವಮಂಗೀಕಾರ್ಯಮ್ । ನ ಚ ತನ್ನಿವೃತ್ತಿರಪಿ ತಾದೃಶೀ ಸಂಭವತೀತ್ಯೇವಂ ಮೋಕ್ಷಸ್ಯ ಪಂಚಮಪ್ರಕಾರತಾ ಪರೇಣಾಂಗೀಕೃತಾ ।**

**ಸ್ಯಾದಿಯಂ[29] ಯದ್ಯಜ್ಞಾನಮೇವ ಪರಮತೇ ಸ್ಯಾತ್ । ನ ಚ ತತ್ಸಂಭವತಿ । 'ಸಿದ್ಧತ್ವಾತ್ಸ್ವರೂಪಸ್ಯ' ಇತ್ಯಾದಿನಾ ತದಸಂಭವಸ್ಯೋಕ್ತತ್ವಾತ್ ।**

28) 'ಅಹಮಜ್ಞಃ' ಇತಿ ಪ್ರತೀತಿವಿರೋಧಾದಿತ್ಯರ್ಥಃ । ಯದಸತ್ತನ್ನ ಪ್ರತೀಯತ ಇತ್ಯಂಗೀಕಾರದಿತಿ ಭಾವಃ । (ಶ್ರೀನಿ)

29) ಇಯಂ ಪರಾಂಗೀಕೃತಾ ಪಂಚಮಪ್ರಕಾರತಾ ।

**ಅತೋऽಜ್ಞಾನಾಸಂಭವೇನ ಚತುರ್ಥಪ್ರಕಾರಸ್ಯ [30]ಸುತರಾಮಭಾವಾತ್ ತೇನ [31]ಕಲ್ಪ್ಯಮಾನಾ ಮೋಕ್ಷಸ್ಯ ಪಂಚಮಪ್ರಕಾರತಾऽಪಿ [32]ಪೂರ್ವೋಕ್ತರೀತ್ಯೈವ ನಿರಸ್ತಾ ।**

**ಅನುವಾದ :-** ಈ ರೀತಿಯಾಗಿ ಕೆಲವರು ಅಭಿಪ್ರಾಯಪಟ್ಟರೆ ಅದನ್ನು ಆಚಾರ್ಯರು ನಿರಾಕರಿಸುತ್ತಾರೆ-

**'ಅಜ್ಞಾನಾಸಂಭವೇನ ಚತುರ್ಥಪ್ರಕಾರಾಭಾವಾತ್ ಪಂಚಮಪ್ರಕಾರತಾऽಪಿ ನಿರಸ್ತಾ ।'** (ಮೂಲ)

ಅಜ್ಞಾನವೇ ಕೂಡದ ಕಾರಣ ಸದಸದ್ವಿಲಕ್ಷಣತ್ವ ಎಂಬ ನಾಲ್ಕನೇ ಪ್ರಕಾರವೇ ಕೂಡುವುದಿಲ್ಲವಾದ್ದರಿಂದ ಸದಸದ್ವಿಲಕ್ಷಣವಿಲಕ್ಷಣತ್ವ ಎಂಬ ಪಂಚಮಪ್ರಕಾರತ್ವವೂ ನಿರಾಕೃತವಾದಂತೆಯೇ ಎಂದು ಮೂಲಾರ್ಥ.

'ಪಂಚಮಪ್ರಕಾರತಾऽಪಿ ನಿರಸ್ತಾ' ಎಂಬ ಮೂಲದಲ್ಲಿ ಹಿಂದಿನ ವಾಕ್ಯದಲ್ಲಿರುವ 'ಮೋಕ್ಷಸ್ಯ' ಎಂಬ ಪದವನ್ನು ಅನುವರ್ತನ ಮಾಡಿಕೊಳ್ಳಬೇಕು.

''ಅದ್ವೈತಭಂಗ ಬರುವುದರಿಂದ ಅಜ್ಞಾನಕ್ಕೆ ಸತ್ವವನ್ನು ಒಪ್ಪಲು ಬರುವುದಿಲ್ಲ. 'ಯತ್ ಅಸತ್ ತನ್ನ ಪ್ರತೀಯತೇ' ಎಂದು ಅಂಗೀಕರಿಸಿದ್ದರಿಂದ ಅಜ್ಞಾನಕ್ಕೆ ಅಸತ್ವ ಹೇಳಿದರೆ ಅಹಮಜ್ಞಃ ಎಂಬ ಪ್ರತೀತಿವಿರೋಧ ಬರುತ್ತದೆ . ಹೀಗಾಗಿ ಅಜ್ಞಾನಕ್ಕೆ ಅಸತ್ವ ಹೇಳಲು ಬರುವುದಿಲ್ಲ. ಇನ್ನು ಸದಸತ್ವ ಹೇಳಿದರೆ ವಿರುದ್ಧವಾಗುತ್ತದೆ. ಆ ಕಾರಣ ಅಜ್ಞಾನ ಸದಸತ್ ಅಲ್ಲ. ಆದ್ದರಿಂದ ಅಜ್ಞಾನಕ್ಕೆ ಚತುರ್ಥಪ್ರಕಾರವಾದ (ಅನಿರ್ವಚನೀಯತ್ವವನ್ನು) ಸದಸದ್ವಿಲಕ್ಷಣತ್ವವನ್ನು ಅಂಗೀಕರಿಸಬೇಕು. ಅಂದಮೇಲೆ ಆ ಅಜ್ಞಾನದ ನಿವೃತ್ತಿಯೂ ಸದಸದ್ವಿಲಕ್ಷಣ ಎಂದು ಅಂಗೀಕರಿಸಲು ಸಾಧ್ಯವಿಲ್ಲ '' ಎಂಬುದಾಗಿ ಅವಿದ್ಯಾನಿವೃತ್ತಿ-ರೂಪಮೋಕ್ಷಕ್ಕೆ ಸದಸದ್ವಿಲಕ್ಷಣವಿಲಕ್ಷಣತ್ವ ಎಂಬ ಪಂಚಮಪ್ರಕಾರತ್ವವನ್ನು ಪರರು ಅಂಗೀಕರಿಸಿದ್ದಾರೆ.

---

30) ಪ್ರಕಾರಿಣ ಏವಾಭಾವಾದಿತಿ ಭಾವಃ ।

31) ಚತುರ್ಥಪ್ರಕಾರಾಸಂಭವೇನ ಕಲ್ಪ್ಯಮಾನೇತ್ಯರ್ಥಃ ।

32) ಸದ್ಭ್ಯಾಮಧಿಕರಣಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತ ಇತ್ಯುಕ್ತತ್ವೇನಾಜ್ಞಾನೇ ಸತಿ ತನ್ನಿವೃತ್ತಿರೂಪಮೋಕ್ಷಸ್ಯ ಪಂಚಮಪ್ರಕರತಾ ವಕ್ತವ್ಯಾ । ಉಕ್ತರೀತ್ಯಾऽಜ್ಞಾನಸ್ಯೈವಾ-ಸಂಭವೇನ ತನ್ನಿವೃತ್ತಿರೂಪಮೋಕ್ಷಸ್ಯ ಸುತರಾಮಸಂಭವೇನ ಪಂಚಮಪ್ರಕಾರತಾ ಕಸ್ಯ ಸ್ಯಾದಿತಿ ಭಾವಃ । (ಶ್ರೀನಿ)

ಪರರು ಅಂಗೀಕರಿಸಿರುವ ಈ ಪಂಚಮಪ್ರಕಾರತ್ವವು ಕೂಡುತ್ತಿತ್ತು, ಯಾವಾಗ ? ಒಂದುವೇಳೆ ಪರಮತದಲ್ಲಿ ಅಜ್ಞಾನವು ಕೂಡುತ್ತಿದ್ದರೆ. ಆದರೆ ಪರಮತದಲ್ಲಿ ಅಜ್ಞಾನವೇ ಕೂಡುವುದಿಲ್ಲ. ''ಸಿದ್ಧತ್ವಾತ್ ಸ್ವರೂಪಸ್ಯ---'' ಇತ್ಯಾದಿವಾಕ್ಯಗಳಿಂದ ಅಜ್ಞಾನಾಸಂಭವವನ್ನು ತಿಳಿಸಿ ಆಗಿದೆ. ಆದ್ದರಿಂದ ಅಜ್ಞಾನವೇ ಕೂಡುವುದಿಲ್ಲವಾದ್ದರಿಂದ (ಪ್ರಕಾರಿಯೇ ಇಲ್ಲವಾದ್ದರಿಂದ) ಸದಸದ್ವಿಲಕ್ಷಣತ್ವ ಎಂಬ ಚತುರ್ಥಪ್ರಕಾರವು ಸುತರಾಂ ಕೂಡುವುದಿಲ್ಲವಾದ್ದರಿಂದ, ಆ ಚತುರ್ಥಪ್ರಕಾರಾಸಂಭವದಿಂದ ಮೋಕ್ಷಕ್ಕೆ ಕಲ್ಪ್ಯಮಾನವಾದ ಪಂಚಮಪ್ರಕಾರತ್ವವೂ ಕೂಡ ಪೂರ್ವೋಕ್ತರೀತಿಯಿಂದಲೇ ನಿರಾಕೃತವಾಯಿತು.

ಸದ್ಭ್ಯಾಮಧಿಕರಣಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತೇ = ಅಧಿಕರಣ-ಪ್ರತಿಯೋಗಿಗಳು ಇದ್ದಾಗ ಮಾತ್ರ ಅಭಾವ(ಧ್ವಂಸ)ವನ್ನು ಹೇಳಲು ಸಾಧ್ಯ ಎಂದು ಹೇಳಿದ್ದರಿಂದ, ಅಜ್ಞಾನ ಎಂಬ ಧರ್ಮಿಯು ಇದ್ದಾಗ ಮಾತ್ರ ತನ್ನಿವೃತ್ತಿರೂಪಮೋಕ್ಷಕ್ಕೆ ಪಂಚಮಪ್ರಕಾರತ್ವ ಎಂಬ ಧರ್ಮವನ್ನು ಹೇಳಲು ಸಾಧ್ಯ. ಆದರೆ 'ಸಿದ್ಧತ್ವಾತ್ ಸ್ವರೂಪಸ್ಯ' ಇತ್ಯಾದಿಯಾಗಿ ಹೇಳಿದ ಪ್ರಕಾರ ಅಜ್ಞಾನವೇ ಕೂಡದ ಕಾರಣ ತನ್ನಿವೃತ್ತಿರೂಪಮೋಕ್ಷವು ಸುತರಾಂ ಕೂಡುವುದಿಲ್ಲವಾದ್ದರಿಂದ ಪಂಚಮಪ್ರಕಾರತ್ವವನ್ನು ಯಾವುದಕ್ಕೆ ಹೇಳಬೇಕು ? ಎಂದು ಭಾವ.

**ಅವತಾರಿಕೆ :-** 'ಅಜ್ಞಾನಾಸಂಭವೇನ ಚತುರ್ಥಪ್ರಕಾರಾಭಾವಾತ್' ಎಂಬ ವಾಕ್ಯವು ಒಂದುವೇಳೆ ಸ್ವರೂಪತ ಏವ ಅಜ್ಞಾನಾಸಂಭವದಿಂದ ಮೋಕ್ಷನಿರಾಕರಣೆ ಮಾಡುವುದಕ್ಕಾಗಿ ಹೊರಟಿದ್ದಾದರೆ ಆಗ 'ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಮ್' ಎಂಬ ವಾಕ್ಯದಿಂದ ಪುನರುಕ್ತಿ ಬರುತ್ತದೆ. ಮತ್ತು ಅಜ್ಞಾನಾಸಂಭವವು ವಾದಾಂತರಸಾಧ್ಯವಾದ್ದರಿಂದ ಸಾಪೇಕ್ಷತ್ವವೂ ಬರುತ್ತದೆ ಎಂಬುದಾಗಿ ಹಿಂದಿನ ವ್ಯಾಖ್ಯಾನದಲ್ಲಿ ಪೂರ್ಣತೃಪ್ತಿ ಆಗದ ಕಾರಣ 'ಅಜ್ಞಾನಾಸಂಭವೇನ' ಎಂಬ ವಾಕ್ಯವನ್ನು ಮತ್ತೊಂದು ರೀತಿಯಿಂದಲೂ ವ್ಯಾಖ್ಯಾನ ಮಾಡುತ್ತಾರೆ -

**ಟೀಕಾ :- ಅಥವಾ, ಅಜ್ಞಾನನಿವೃತ್ತಿರ್ಯದ್ಯಾತ್ಮಾತಿರಿಕ್ತಾ ಪಂಚಮ-ಪ್ರಕಾರೋರರೀಕ್ರಿಯತೇ ತದಾ ವಕ್ತವ್ಯಂ ಕಿಮಜ್ಞಾನಕಾರ್ಯಂ ? ನ ವಾ ? ಇತಿ । ನ ತಾವದ್ದ್ವಿತೀಯಃ । ಆತ್ಮಾತಿರಿಕ್ತಸ್ಯಾಜ್ಞಾನತತ್ಕಾರ್ಯಯೋರನ್ಯತರತ್ವಾ-ವಶ್ಯಂಭಾವಾಭ್ಯುಪಗಮಾತ್ ।**

**ಆದ್ಯೇ ಬಾಧಕಮಾಹ ।। ಅಜ್ಞಾನಾಸಂಭವೇನೇತಿ ।। ಯದ್ಯಜ್ಞಾನನಿವೃತ್ತಿ-ರಜ್ಞಾನಕಾರ್ಯಾ ತದಾ ಅಜ್ಞಾನಸ್ಯ ತದಾನೀಮವಸ್ಥಾನಂ ಸ್ಯಾತ್ । ನ ಹ್ಯುಪಾದಾನೇನ ವಿನೋಪಾದೇಯಸ್ಯ ಸ್ಥಿತಿರಸ್ತಿ । ಅಜ್ಞಾನನಿವೃತ್ತಾವಜ್ಞಾನಾ-ಸಂಭವಾತ್ । ತಥಾ ಚಾಜ್ಞಾನನಿವೃತ್ತೇರುಭಯಥಾಽಪ್ಯಸಂಭವೇನ ಸ್ವರೂಪಮೇವ ನಾಸ್ತಿ । ಪಂಚಮಪ್ರಕಾರತಾ ತು ದೂರನಿರಸ್ತೇತಿ ।**

**ಕಿಂಚ ಘಟಾದೀನಾಂ ಸತ್ತ್ವಂ, ಶಶವಿಷಾಣಾದೀನಾಮಸತ್ತ್ವಂ, ಘಟಾದೀನಾಮೇವ ದೇಶಕಾಲಾದಿವ್ಯವಸ್ಥಯಾ ಸದಸತ್ತ್ವಮಿತಿ ಪ್ರಕಾರತ್ರಯಸ್ಯೈವಾನುಭವಾತ್ ಚತುರ್ಥಪ್ರಕಾರ ಏವ ನಾಸ್ತಿ । ತದಭಾವಾತ್ ಪಂಚಮಪ್ರಕಾರತಾ ತು ಮೋಕ್ಷಸ್ಯಾಷ್ಟಮರಸ ಇವಾತ್ಯಂತಾಸಂಭಾವಿನೀತ್ಯಾಹ ।। ಚತುರ್ಥಪ್ರಕಾರೇತಿ ।।**

**ಅನುವಾದ :-** ಅಥವಾ ಒಂದುವೇಳೆ, ಅಜ್ಞಾನನಿವೃತ್ತಿಯನ್ನು ಆತ್ಮಾತಿರಿಕ್ತವಾಗಿ ಪಂಚಮಪ್ರಕಾರವಾಗಿ ಅಂಗೀಕರಿಸುವುದಾದರೆ ಆಗ ಹೇಳಿ - ಆ ಅಜ್ಞಾನನಿವೃತ್ತಿಯು ಅಜ್ಞಾನಕಾರ್ಯವಾಗಿದೆಯೋ ? ಇಲ್ಲವೋ ? ಎಂದು.

ಆತ್ಮಾತಿರಿಕ್ತವಾದ ವಸ್ತುವಿಗೆ ಅಜ್ಞಾನ-ತತ್ಕಾರ್ಯಅನ್ಯತರತ್ವವನ್ನು ಅವಶ್ಯವಾಗಿ ಅಂಗೀಕರಿಸಿದ್ದರಿಂದ, ಅಜ್ಞಾನಕಾರ್ಯ ಅಲ್ಲ ಎಂಬ ಎರಡನೇ ಪಕ್ಷ ಸರಿಯಲ್ಲ. ಪರಮತದಲ್ಲಿ ಪದಾರ್ಥವು ಮೂರು ವಿಧ. 1.ಆತ್ಮಾ 2.ಅಜ್ಞಾನ 3.ಅಜ್ಞಾನಕಾರ್ಯ ಎಂದು. ಈ ಅಜ್ಞಾನನಿವೃತ್ತಿಯು ಆತ್ಮಾತಿರಿಕ್ತವಾಗುವುದಾದರೆ ಒಂದು ಅಜ್ಞಾನವಾಗಬೇಕು ಇಲ್ಲವೇ ಅಜ್ಞಾನಕಾರ್ಯವಾಗಬೇಕು. ಅದರಲ್ಲಿ ಅಜ್ಞಾನನಿವೃತ್ತಿಯು ಅಜ್ಞಾನವಾಗಲು ಸಾಧ್ಯವಿಲ್ಲವಾದ್ದರಿಂದ ಪರಿಶೇಷತಃ ಅಜ್ಞಾನಕಾರ್ಯವೇ ಆಗಬೇಕಾದ್ದರಿಂದ ಅಜ್ಞಾನನಿವೃತ್ತಿಯು ಅಜ್ಞಾನಕಾರ್ಯವಲ್ಲ ಎಂಬ ಎರಡನೇ ಪಕ್ಷ ಸರಿಯಲ್ಲ ಎಂದು ಭಾವ.

ಅಜ್ಞಾನನಿವೃತ್ತಿಯು ಅಜ್ಞಾನಕಾರ್ಯವಾಗಿದೆ ಎಂಬ ಮೊದಲನೇ ಪಕ್ಷಕ್ಕೆ ಬಾಧಕವನ್ನು ಹೇಳಿದರು - 'ಅಜ್ಞಾನಾಸಂಭವೇನ' ಎಂಬ ವಾಕ್ಯದಿಂದ.

ಒಂದುವೇಳೆ ಅಜ್ಞಾನನಿವೃತ್ತಿಯು ಅಜ್ಞಾನಕಾರ್ಯವಾಗುವುದಾದರೆ ಆಗ ಅಜ್ಞಾನನಿವೃತ್ತಿದಶಾದಲ್ಲಿ ಅಜ್ಞಾನವು ಇರಬೇಕಾಗುತ್ತದೆ. ಯಾಕೆ ? ಉಪಾದಾನಕಾರಣ ಇಲ್ಲದೇ ಉಪಾದೇಯಕಾರ್ಯವು ಇರಲು ಸಾಧ್ಯವಿಲ್ಲ. ಅಜ್ಞಾನನಿವೃತ್ತಿಯು ಅಜ್ಞಾನದ ಕಾರ್ಯ ಎಂಬ ಪಕ್ಷದಲ್ಲಿ ಅಜ್ಞಾನನಿವೃತ್ತಿಗೆ ಅಜ್ಞಾನವು ಉಪಾದಾನಕಾರಣ-

ವಾಗುವುದರಿಂದ ಅಜ್ಞಾನನಿವೃತ್ತಿ ಎಂಬ ಉಪಾದೇಯಕಾರ್ಯ ಇರುವಾಗ ಅಜ್ಞಾನ ಎಂಬ ಉಪಾದಾನಕಾರಣವೂ ಇರಬೇಕಾಗುತ್ತದೆ ಎಂದು ಭಾವ.

ಹಾಗಾದರೆ 'ಅಜ್ಞಾನನಿವೃತ್ತಿ ದಶಾದಲ್ಲಿ ಅಜ್ಞಾನವು ಇರಲಿ' ಎಂದು ಶಂಕೆ ಬಂದರೆ, ಆಗ 'ಅಜ್ಞಾನಾಸಂಭವೇನ' ಎಂಬ ಮೂಲಗ್ರಂಥವು ಪ್ರವೃತ್ತವಾಗಿದೆ. 'ಅಜ್ಞಾನನಿವೃತ್ತಿದಶಾದಲ್ಲಿ ಅಜ್ಞಾನ ಇರಲು ಸಾಧ್ಯವಿಲ್ಲವಾದ್ದರಿಂದ' ಎಂದು ಮೂಲಾರ್ಥ.

**ಅಜ್ಞಾನಾಸಂಭವೇನ** = ಈ ರೀತಿಯಾಗಿ ಅಜ್ಞಾನನಿವೃತ್ತಿಯು ಎರಡು ಪಕ್ಷಗಳಲ್ಲಿಯೂ ಕೂಡುವುದಿಲ್ಲವಾದ್ದರಿಂದ (ಅಜ್ಞಾನಕಾರ್ಯ-ಅಜ್ಞಾನಕಾರ್ಯವಲ್ಲ ಎಂಬ ಎರಡು ಪಕ್ಷಗಳಲ್ಲಿಯೂ ಅಸಂಭಾವಿತವಾದ್ದರಿಂದ) ಅಜ್ಞಾನನಿವೃತ್ತಿಯು ಸ್ವರೂಪತ ಏವ ಇಲ್ಲ. ಅಜ್ಞಾನನಿವೃತ್ತಿ ಎಂಬ ಪ್ರಕಾರಿಯೇ ಇಲ್ಲವಾದ್ದರಿಂದ **ಪಂಚಮಪ್ರಕಾರತಾಽಪಿ ನಿರಸ್ತಾ** = ಆದಕ್ಕೆ ಪಂಚಮಪ್ರಕಾರತ್ವವು ದೂರದಿಂದಲೇ ನಿರಾಕೃತವಾಯಿತು ಎಂದು ಮೂಲಾರ್ಥವಾಗುತ್ತದೆ.

ಈ ರೀತಿ ಯೋಜನೆ ಮಾಡಿದಾಗ ಮೂಲದಲ್ಲಿ ''ಚತುರ್ಥಪ್ರಕಾರಾಭಾವಾತ್'' ಎಂಬ ಪದವು ಉರ್ವರಿತವಾಗುತ್ತದೆ. (ವ್ಯಾಖ್ಯಾತವಾಗದೇ ಉಳಿದುಬಿಡುತ್ತದೆ.) ಅದಕ್ಕಾಗಿ ಅದನ್ನು ಯೋಜಿಸುತ್ತಾರೆ ''ಕಿಂಚ'' ಇತ್ಯಾದಿಯಾಗಿ.

ಮತ್ತು ಘಟಾದಿಗಳಿಗೆ ಸತ್ತ್ವ, ಶಶವಿಷಾಣಾದಿಗಳಿಗೆ ಅಸತ್ತ್ವ, ಘಟಾದಿಗಳಿಗೇನೇ ದೇಶ-ಕಾಲ-ಪ್ರಕಾರಗಳ ವ್ಯವಸ್ಥೆಯಿಂದ ಸದಸತ್ತ್ವ (ಘಟಕ್ಕೆ ಸ್ವೋಪಾಧಿಯಲ್ಲಿ = ತನಗೆ ಆಶ್ರಯವಾದದ್ದರಲ್ಲಿ ಸತ್ತ್ವ, ಪರೋಪಾಧಿಯಲ್ಲಿ ಅಸತ್ತ್ವ, ಈ ಕಾಲದಲ್ಲಿ ಸತ್ತ್ವ, ಕಾಲಾಂತರದಲ್ಲಿ ಅಸತ್ತ್ವ, ಘಟತ್ವೇನ ಪ್ರಾಕಾರೇಣ ಸತ್ತ್ವ, ಪಟತ್ವಾದಿ ಪ್ರಕಾರದಿಂದ ಅಸತ್ತ್ವ ಎಂಬ ವ್ಯವಸ್ಥೆಯಿಂದ ಸದಸತ್ತ್ವ), ಈ ರೀತಿಯಾಗಿ ಸತ್ತ್ವ-ಅಸತ್ತ್ವ-ಸದಸತ್ತ್ವ ಎಂಬ ಮೂರು ಪ್ರಕಾರಗಳು ಮಾತ್ರವೇ ಅನುಭವಕ್ಕೆ ಬರುವುದರಿಂದ (ದೃಷ್ಟಾನುಸಾರವಾಗಿ ಕಲ್ಪನೆ ಕಂಡಿರುವುದರಿಂದ ಘಟಾದಿಪ್ರಪಂಚದಲ್ಲಿ ಮೂರು ಪ್ರಕಾರಗಳು ಮಾತ್ರ ಅನುಭೂಯಮಾನವಾಗುತ್ತಿರುವುದರಿಂದ ಅಜ್ಞಾನನಿವೃತ್ತಿಯಲ್ಲಿಯೂ ಈ ಮೂರು ಪ್ರಕಾರಗಳನ್ನು ಮಾತ್ರವೇ ಹೇಳಬೇಕಾದ್ದರಿಂದ) ಸದಸದ್ವಿಲಕ್ಷಣತ್ವ ಎಂಬ ನಾಲ್ಕನೇ ಪ್ರಕಾರವು ಅನುಭವಕ್ಕೆ ಬಾರದ ಕಾರಣ ಚತುರ್ಥಪ್ರಕಾರವೇ ಇಲ್ಲ. ಚತುರ್ಥಪ್ರಕಾರವೇ ಇಲ್ಲ ಎಂದಮೇಲೆ ಮೋಕ್ಷಕ್ಕೆ ಪಂಚಮಪ್ರಕಾರತ್ವವಾದರೂ ಅಷ್ಟಮರಸದಂತೆ

(ಲೋಕದಲ್ಲಿ ಷಡ್ರಸಗಳು ಮಾತ್ರ ಅನುಭವಕ್ಕೆ ಬರುವುದರಿಂದ ಸಪ್ತಮರಸವೇ ಅನುಭೂಯಮಾನವಾಗಿಲ್ಲ ಎಂದಮೇಲೆ ಅಷ್ಟಮರಸವು ಯಾವ ರೀತಿಯಾಗಿ ಅತ್ಯಂತ ಅಸಂಭಾವಿತವೋ ಅದರಂತೆ) ಅತ್ಯಂತ ಅಸಂಭಾವಿತವಾಗಿದೆ ಎಂಬ ಅಭಿಪ್ರಾಯವನ್ನು ''ಚತುರ್ಥಪ್ರಕಾರಾಭಾವಾತ್'' ಎನ್ನುವ ಮೂಲದಲ್ಲಿ ವ್ಯಕ್ತಪಡಿಸುತ್ತಿದ್ದಾರೆ.

**ಟೀಕಾ :- ಅಜ್ಞಾನಾಸಂಭವಾದಧಿಕಾರೀ ಚ ನಿರಸ್ತ ಇತ್ಯುಕ್ತಮ್ । ತದ್ವಿವರಣಾರ್ಥಮಾಹ -**

**- ಮಾಯಾವಾದಖಂಡನ -**

ವಿಷಯಪ್ರಯೋಜನಾಭಾವಾದೇವಾಧಿಕಾರೀ ಚ ।

**ನಿರಸ್ತ ಇತಿ ಸಂಬಂಧಃ । ಯೋ ಹಿ ಯತ್ಪ್ರಯೋಜನಮರ್ಥಯಮಾನೋ ಯಂ ವಿಷಯಂ ಜಿಜ್ಞಾಸತೇ ಸ ಏವ ತತ್ರಾಧಿಕಾರೀ ಭವತಿ । ಪ್ರಕೃತೇ ಚಾಜ್ಞಾನಾಸಂಭವೇನ ವಿಷಯಪ್ರಯೋಜನೇ ನಿರಾಕೃತೇ ಇತಿ ತದಭಾವಾದೇವ ತದವಿನಾಭೂತೋಽಧಿಕಾರೀ ಚ ನಿರಸ್ತೋ ವೇದಿತವ್ಯಃ ।**

**ಅನುವಾದ :-** 'ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಂ' ಎಂಬ ವಾಕ್ಯದಿಂದ ಅಜ್ಞಾನ ಕೂಡದ ಕಾರಣ ಅಧಿಕಾರಿಯೂ ನಿರಾಕೃತವಾದಂತಾಯಿತು ಎಂದು ಹೇಳಿದರು. ಅದನ್ನು ವಿವರಣೆ ಮಾಡುವುದಕ್ಕಾಗಿ ಆಚಾರ್ಯರು ಹೇಳುತ್ತಾರೆ-

**ವಿಷಯಪ್ರಯೋಜನಾಭಾವಾದೇವಾಧಿಕಾರೀ ಚ ।** (ಮೂಲ)

ವಿಷಯ-ಪ್ರಯೋಜನಗಳು ಕೂಡುವುದಿಲ್ಲವಾದ್ದರಿಂದ ಅಧಿಕಾರಿಯೂ ನಿರಾಕೃತನಾಗುತ್ತಾನೆ ಎಂದು ಮೂಲಾರ್ಥ.

ಮೂಲದಲ್ಲಿ 'ಅಧಿಕಾರೀ ಚ' ಎಂಬುದಕ್ಕೆ 'ನಿರಸ್ತಃ' ಎಂಬ ಪದದೊಂದಿಗೆ ಸಂಬಂಧ (ಅನ್ವಯ) ಮಾಡಿಕೊಳ್ಳಬೇಕು. ಯಾವ ವ್ಯಕ್ತಿ ಯಾವ ಪ್ರಯೋಜನವನ್ನು ಇಚ್ಛಿಸುವವನಾಗಿ ಯಾವ ವಿಷಯವನ್ನು ತಿಳಿಯಲು ಬಯಸುತ್ತಾನೆಯೋ ಆ ವ್ಯಕ್ತಿಯೇ ಆ ವಿಷಯದಲ್ಲಿ ಅಧಿಕಾರೀ ಆಗುತ್ತಾನೆ. ಪ್ರಕೃತದಲ್ಲಿ ಅಜ್ಞಾನ ಕೂಡುವುದಿಲ್ಲವಾದ್ದರಿಂದ ವಿಷಯ-ಪ್ರಯೋಜನಗಳು ನಿರಾಕೃತವಾಗಿವೆಯಾದ್ದರಿಂದ, ವಿಷಯ-ಪ್ರಯೋಜನಗಳೇ ಇಲ್ಲವಾದ್ದರಿಂದ ವಿಷಯ-ಪ್ರಯೋಜನಗಳಿಂದ ಅವಿನಾಭೂತವಾದ (ವಿಷಯಾದಿ-ಘಟಿತವಾದ ಲಕ್ಷಣ ಉಳ್ಳ) ಅಧಿಕಾರಿಯೂ ನಿರಾಕೃತನಾದನೆಂದು ತಿಳಿಯಬೇಕು.

**ಟೀಕಾ :- ಅಜ್ಞಾನಾಸಂಭವಾತ್ ಸಂಬಂಧಾಭಾವ ಉಕ್ತಃ । ತಮುಪಪಾದಯತಿ -**

**- ಮಾಯಾವಾದಖಂಡನ -**

ತದಭಾವಾದೇವ ಸಂಬಂಧೋऽಪಿ ।

**ಸತಾಮೇವ ಹಿ ಸಂಬಂಧೋ ಭವತಿ । ಅಜ್ಞಾನಾಸಂಭವೇನ ವಿಷಯಾದ್ಯಭಾವಶ್ಚೋಪಪಾದಿತಃ । ಅತೋ ವಿಷಯಾದ್ಯಭಾವಾತ್ ಸಂಬಂಧೋऽಪಿ ನಿರಸ್ತ ಏವೇತಿ ।**

**ಅನುವಾದ :-** 'ಅಜ್ಞಾನಾಸಂಭವಾತ್ ತನ್ಮತಮಖಿಲಮಪಾಕೃತಂ' ಎಂಬ ವಾಕ್ಯದಿಂದ ಅಜ್ಞಾನ ಕೂಡುವುದಿಲ್ಲವಾದ್ದರಿಂದ ಸಂಬಂಧವು ನಿರಾಕೃತವಾಯಿತು ಎಂದು ಹೇಳಿದರು. ಆಚಾರ್ಯರು ಅದನ್ನು ಉಪಪಾದನೆ ಮಾಡುತ್ತಾರೆ -

**ತದಭಾವಾದೇವ ಸಂಬಂಧೋऽಪಿ ।** (ಮೂಲ)

ವಿಷಯಾದಿಗಳು ಕೂಡುವುದಿಲ್ಲವಾದ್ದರಿಂದಲೇ ಸಂಬಂಧವೂ ನಿರಾಕೃತವಾಯಿತು ಎಂದು ಮೂಲಾರ್ಥ.

ಅಸತ್ ಆದ ಶಶಶೃಂಗ-ನೃಶೃಂಗಗಳಿಗೆ ಸಂಬಂಧ ಇಲ್ಲವಾದ್ದರಿಂದ ಸತ್ ಆದ ವಸ್ತುಗಳಿಗೆ ಮಾತ್ರ ಸಂಬಂಧವು ಉಂಟಾಗುತ್ತದೆ. ಪ್ರಕೃತದಲ್ಲಿ ಅಜ್ಞಾನ ಕೂಡುವುದಿಲ್ಲವಾದ್ದರಿಂದ ವಿಷಯಾದಿಗಳು ಇಲ್ಲ (ಕೂಡುವುದಿಲ್ಲ) ಎಂದು ಹಿಂದೆ ಉಪಪಾದನೆ ಮಾಡಲಾಗಿದೆ. ಆದ್ದರಿಂದ ವಿಷಯಾದಿಗಳೇ ಇಲ್ಲವಾದ್ದರಿಂದ (ಸಂಬಂಧಿಗಳೇ ಇಲ್ಲವಾದ್ದರಿಂದ) ಸಂಬಂಧವೂ ನಿರಾಕೃತವಾದಂತೆಯೇ ಆಯಿತು ಎಂದು ಭಾವ.

**ಟೀಕಾ :- ಏವಂ ವೇದಾದೇರ್ಜೀವಬ್ರಹ್ಮಣೋರೇಕತ್ವಪ್ರತಿಪಾದಕತ್ವೇ ಅನಾರಂಭಣೀಯತ್ವಪ್ರಸಂಗಾನ್ನ ತತ್ಪ್ರತಿಪಾದಕತ್ವಮಿತ್ಯುಕ್ತಮ್ । ಇದಾನೀಂ ಪರಮಾಪ್ತತಮೇನ ಭಗವತಾ ಶ್ರುತ್ಯಾ ಚ ವಿಷ್ಣೋಃ ಸರ್ವೋತ್ತಮತ್ವಸ್ಯೈವ ಸರ್ವಶಾಸ್ತ್ರಪ್ರತಿಪಾದ್ಯತಯಾ ಅಭಿಹಿತತ್ವಾಚ್ಚ ತದೇವ ವೇದಾದಿಪ್ರತಿಪಾದ್ಯಂ ನಾತ್ಮಬ್ರಹ್ಮೈಕ್ಯಮಿತ್ಯಾಹ -**

## - ಮಾಯಾವಾದಖಂಡನ -

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**

**'ಇಮೌ' ಇತಿ ಪ್ರಮಾಣಸಿದ್ಧತಾಂ ಸೂಚಯತಿ । ಪುರುಷೌ ಚೇತನೌ । ಏವಶಬ್ದಸ್ಯ ದ್ವಾವೇವೇತಿ ಸಂಬಂಧಃ । ತದ್ಘಟನಾಯ ಪರಮಪುರುಷಂ ವ್ಯಾವರ್ತಯಿತುಂ ಲೋಕ ಇತ್ಯುಕ್ತಮ್ ।**

**ಅನುವಾದ :-** ಈ ರೀತಿಯಾಗಿ ''ವೇದಾದಿಗಳು ಜೀವ-ಬ್ರಹ್ಮರ ಐಕ್ಯಪ್ರತಿಪಾದಕವಾಗುವುದಾದರೆ ಅನಾರಂಭಣೀಯವಾಗಬೇಕಾದ ಪ್ರಸಂಗ ಬರುವುದರಿಂದ ವೇದಾದಿಗಳು ಐಕ್ಯಪ್ರತಿಪಾದಕವಲ್ಲ'' ಎಂದು ಹೇಳಿದರು. ಈಗ ಪರಮಾಪ್ತತಮನಾದ ಭಗವಂತನಿಂದ ಹಾಗೂ ಶ್ರುತಿಯಿಂದ ವಿಷ್ಣುವಿನ ಸರ್ವೋತ್ತಮತ್ವವೇ ಸರ್ವಶಾಸ್ತ್ರಪ್ರತಿಪಾದ್ಯವಾಗಿ ಹೇಳಲ್ಪಟ್ಟಿದ್ದರಿಂದಲೂ ಸಹ ವಿಷ್ಣುವಿನ ಸರ್ವೋತ್ತಮತ್ವವೇ ವೇದಾದಿಪ್ರತಿಪಾದ್ಯವಾಗಿದೆ. ಹೊರತು ಜೀವ-ಬ್ರಹ್ಮೈಕ್ಯ ವೇದಾದಿಪ್ರತಿಪಾದ್ಯವಲ್ಲ ಎಂದು ಹೇಳುತ್ತಾರೆ -

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।** (ಮೂಲ)

ಮೂಲದಲ್ಲಿ 'ಇಮೌ' ಎಂಬುದಾಗಿ ಕ್ಷರ-ಅಕ್ಷರಪುರುಷರಿಗೆ ಪ್ರಮಾಣಸಿದ್ಧತ್ವವನ್ನು ಸೂಚಿಸುತ್ತಿದ್ದಾರೆ. ಮೂಲದಲ್ಲಿ 'ಪುರುಷೌ' ಎಂಬ ಪದಕ್ಕೆ ಚೇತನೌ=ಚೇತನರು ಎಂದು ಅರ್ಥ.

ಚಶಬ್ದವು ಸಮುಚ್ಚಾಯಕವಾಗಿದೆ. ಏವಶಬ್ದವು ವ್ಯಾವರ್ತಕವಾಗಿದೆ. ಅಂತಹ ವಿರುದ್ಧವಾದ ಏವ-ಚಶಬ್ದಗಳನ್ನು ಹೇಗೆ ಅನ್ವಯಿಸಿಕೊಳ್ಳುವುದು ? ಎಂದು ಶಂಕಿಸಲು ಅವಕಾಶವಿಲ್ಲ, ಕಾರಣ ಏವಶಬ್ದವು 'ದ್ವೌ ಏವ' ಎಂಬುದಾಗಿ ದ್ವಿಶಬ್ದದ ಜೊತೆಗೆ ಅನ್ವಯ ಹೊಂದುತ್ತದೆ. ಚಶಬ್ದಗಳು 'ಕ್ಷರಶ್ಚ ಅಕ್ಷರಶ್ಚ' ಎಂಬುದಾಗಿ ಕ್ಷರಶಬ್ದದ ಜೊತೆಗೆ ಅನ್ವಯ ಹೊಂದುತ್ತವೆ. ಆದ್ದರಿಂದ ಅನುಪಪತ್ತಿ ಇಲ್ಲ.

ಮುಂದೆ ಪರಮಪುರುಷ ಎಂಬ ಮೂರನೇ ಪುರುಷನನ್ನು ಹೇಳುವುದರಿಂದ ''ದ್ವೌ ಏವ ಪುರುಷೌ=ಇಬ್ಬರೇ ಪುರುಷರು'' ಎಂದು ಹೇಳುವುದು ಅನುಪಪನ್ನ ಎಂದು ಶಂಕೆ ಬಂದರೆ, ದ್ವಾವೇವ=ಇಬ್ಬರೇ ಪುರುಷರು ಎಂಬುದನ್ನು ಕೂಡಿಸುವುದಕ್ಕಾಗಿ ಮೂಲದಲ್ಲಿ 'ಲೋಕೇ' ಎಂದು ಹೇಳಲಾಗಿದೆ. 'ಲೋಕೇ' ಎಂಬುದಕ್ಕೆ ಈಶೀತವರ್ಗೇ= ಈಶಿತವ್ಯವರ್ಗದಲ್ಲಿ (ಅಧೀನರಾದವರ ಮಧ್ಯದಲ್ಲಿ) ಎಂದು ಅರ್ಥ.

ಹಾಗಾದರೆ -

ಲೋಕೇ = ಈಶಿತವ್ಯವರ್ಗದಲ್ಲಿ ಕ್ಷರಶ್ಚ ಅಕ್ಷರಶ್ಚ = ಕ್ಷರ-ಅಕ್ಷರ ಎಂಬುದಾಗಿ ದ್ವಾವೇವ ಪುರುಷೌ = ಇಬ್ಬರೇ ಪುರುಷರು (ಚೇತನರು) ಇದ್ದಾರೆ ಎಂದು ಮೂಲಾರ್ಥವಾಗುತ್ತದೆ.

**ವಿವರಣೆ 1)**

**ಟೀಕಾ :- 'ಇಮೌ' ಇತಿ ಪ್ರಮಾಣಸಿದ್ಧತಾಂ ಸೂಚಯತಿ ।**

ಮೂಲದಲ್ಲಿ 'ಇಮೌ' ಎಂಬುದಾಗಿ ಕ್ಷರ-ಅಕ್ಷರಪುರುಷರಿಗೆ ಪ್ರಮಾಣಸಿದ್ಧತ್ವವನ್ನು ಸೂಚಿಸುತ್ತಿದ್ದಾರೆ.

ಪ್ರತ್ಯಕ್ಷಸಿದ್ಧವಾದ ವಸ್ತುವಿನಲ್ಲಿ ಅಯಂ ಇದಂ ಎಂಬುದಾಗಿ ಇದಂಶಬ್ದಪ್ರಯೋಗ ಕಂಡಿದೆ. ಪ್ರಕೃತದಲ್ಲಿ ಸಮಸ್ತ ಕ್ಷರ-ಅಕ್ಷರಪುರುಷರು ಪ್ರತ್ಯಕ್ಷಸಿದ್ಧರಾಗದ ಕಾರಣ ಇಮೌ ದ್ವೌ ಪುರುಷೌ ಎಂದು ಇದಂಶಬ್ದಪ್ರಯೋಗ ಮಾಡಿರುವುದು ಹೇಗೆ ಉಪಪನ್ನವಾಗುತ್ತದೆ ? ಎಂದು ಶಂಕೆ ಬಂದರೆ, ಅದು ಸರಿಯಲ್ಲ, ಕಾರಣ - ಮೂಲದಲ್ಲಿ ಇಮೌ ಎಂಬ ಇದಂಶಬ್ದದಿಂದ ಕ್ಷರ-ಅಕ್ಷರಪುರುಷರಿಗೆ ಪ್ರಮಾಣಸಿದ್ಧತ್ವವನ್ನು ಸೂಚಿಸುತ್ತಿದ್ದಾರೆ. ಹಾಗಾದರೆ - ಇಮೌ ದ್ವೌ ಪುರುಷೌ = ಪ್ರಮಾಣಸಿದ್ಧರಾದ ಪುರುಷರು ಇಬ್ಬರು ಎಂದು ಮೂಲಾರ್ಥವಾಗುತ್ತದೆ.

**ವಿವರಣೆ 2)**

**ಟೀಕಾ :- ಪುರುಷೌ ಚೇತನೌ ।**

ಮೂಲದಲ್ಲಿ 'ಪುರುಷೌ' ಎಂಬ ಪದಕ್ಕೆ ಚೇತನೌ=ಚೇತನರು ಎಂದು ಅರ್ಥ.

'ಬ್ರಹ್ಮಾ ಶಿವಸ್ಸುರೇಶಾದ್ಯಾಃ ಶರೀರಕ್ಷರಣಾತ್ ಕ್ಷರಾಃ' ಎಂಬ ಪ್ರಮಾಣಾನುಸಾರವಾಗಿ ಬ್ರಹ್ಮಾದಿಪುರುಷರಂತೆ ಸರಸ್ವತ್ಯಾದಿಸ್ತ್ರೀಯರಿಗೂ ಸಹ ಶರೀರಕ್ಷರಣಯೋಗದಿಂದ ಕ್ಷರಶಬ್ದವಾಚ್ಯತ್ವ ತಿಳಿದುಬರುವುದರಿಂದ, ಪ್ರಕೃತ ಪುರುಷೌ ದ್ವೌ ಎಂದು ಹೇಳಿದರೆ ಸರಸ್ವತ್ಯಾದಿಸ್ತ್ರೀಯರನ್ನು ಹಾಗೂ ಅಕ್ಷರಶಬ್ದವಾಚ್ಯಳಾದ ರಮೆಯನ್ನು ಸಂಗ್ರಹ ಮಾಡಿದಂತಾಗುವುದಿಲ್ಲವಲ್ಲ ? ಎಂಬ ಶಂಕೆಗೆ ಅವಕಾಶವಿಲ್ಲ. ಕಾರಣ ಮೂಲದಲ್ಲಿರುವ ಪುರುಷೌ ಎಂಬ ಪದಕ್ಕೆ ಚೇತನೌ=ಚೇತನರು ಎಂದು ಅರ್ಥ. ಹೀಗಾಗಿ ಪುರುಷತ್ವವನ್ನು (ಲಿಂಗವಿಶೇಷವನ್ನು) ವಿವಕ್ಷಿಸದೇ ಚೇತನತ್ವವನ್ನು ವಿವಕ್ಷಿಸಿದ್ದರಿಂದ

ಸರಸ್ವತ್ಯಾದಿಕ್ಷರಸ್ತ್ರೀಯರು ಹಾಗೂ ಅಕ್ಷರಶಬ್ದವಾಚ್ಯಳಾದ ರಮಾದೇವಿಯೂ ಸಂಗೃಹೀತರಾಗುತ್ತಾರಾದ್ದರಿಂದ ಯಾವ ಅನುಪಪತ್ತಿ ಇಲ್ಲ ಎಂದು ಭಾವ.

## - ಮಾಯಾವಾದಖಂಡನ -

**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।**

**ಟೀಕಾ :- ತದನೇನೋತ್ತಮಪುರುಷನಿರೂಪಣಸ್ಯಾಪೇಕ್ಷಿತಂ ಪುರುಷನಿರೂಪಣಂ ಕೃತಮ್ ।**

**ಅನುವಾದ :-** ಉತ್ತಮತ್ವವು ಅವಧಿಸಾಪೇಕ್ಷವಾದ್ದರಿಂದ ಪುರುಷೋತ್ತಮನ ಜ್ಞಾನವಾಗಬೇಕಾದರೆ ಪುರುಷರ ಜ್ಞಾನವಾಗಬೇಕು. ಮೂಲದಲ್ಲಿ ಕ್ಷರ-ಅಕ್ಷರ ಪುರುಷರನ್ನು ನಿರೂಪಿಸುವುದರಿಂದ ಉತ್ತಮಪುರುಷನಿರೂಪಣೆಗೆ ಅಪೇಕ್ಷಿತವಾದ ಪುರುಷನಿರೂಪಣೆಯನ್ನು ಮಾಡಿದಂತಾಯಿತು.

**ಮೂಲಾರ್ಥ :-** 'ಬ್ರಹ್ಮಾ ಶಿವಸ್ಸುರೇಶಾದ್ಯಾಃ ಶರೀರಕ್ಷರಣಾತ್ ಕ್ಷರಾಃ' ಎಂದು ಹೇಳಿದ ಪ್ರಕಾರ ಸರ್ವಾಣಿ ಭೂತಾನಿ = ಬ್ರಹ್ಮಾದಿ ಎಲ್ಲ ಜೀವರು ಕ್ಷರಃ = ಶರೀರಕ್ಷರಣ-ಯೋಗದಿಂದ (ನಾಶವಾಗುವ ಶರೀರ ಉಳ್ಳವರಾದ್ದರಿಂದ) ಕ್ಷರಶಬ್ದದಿಂದ ವಾಚ್ಯರಾಗಿದ್ದಾರೆ. ಕೂಟಸ್ಥಃ = 'ಕೂಟಂ ಖಂ ವಿದಲಂ ವ್ಯೋಮ ಸಂಧಿರಾಕಾಶ ಉಚ್ಯತೇ' ಎಂದು ಕೋಶ ಇರುವುದರಿಂದ ಕೂಟ ಎಂದರೆ ಅವ್ಯಾಕೃತ ಆಕಾಶ. ಆ ಅವ್ಯಾಕೃತ ಆಕಾಶದಂತೆ ನಿರ್ವಿಕಾರವಾಗಿ ಇರುವುದರಿಂದ ಅಥವಾ ಕೂಟದಲ್ಲಿ (ಅವ್ಯಾಕೃತ ಆಕಾಶದಲ್ಲಿ) ಅಭಿಮಾನಿನಿಯಾಗಿ ಇರುವುದರಿಂದ ಕೂಟಸ್ಥಶಬ್ದವಾಚ್ಯಳಾದ ಮಹಾಲಕ್ಷ್ಮಿಯು ಅಕ್ಷರಃ ಉಚ್ಯತೇ = 'ಲಕ್ಷ್ಮೀರಕ್ಷರದೇಹತ್ವಾದಕ್ಷರಾ' ಎಂದು ಹೇಳಿದಂತೆ ಅಕ್ಷರದೇಹತ್ವನಿಮಿತ್ತದಿಂದ (ನಾಶವಾಗದ ದೇಹ ಉಳ್ಳವಳಾದ್ದರಿಂದ) ಅಕ್ಷರಶಬ್ದದಿಂದ ವಾಚ್ಯಳಾಗಿದ್ದಾಳೆ ಎಂದು.

**ಪುಲ್ಲಿಂಗ ಶಬ್ದ !!!**

ಲಕ್ಷ್ಮೀದೇವಿಯು ಸ್ತ್ರೀ ಆದ್ದರಿಂದ ಅಕ್ಷರಾ ಎಂದು ಸ್ತ್ರೀಲಿಂಗಶಬ್ದ ಬಳಸಬೇಕಿತ್ತು. ಆದರೆ ಕೂಟಸ್ಥಃ ಅಕ್ಷರಃ ಎಂಬುದಾಗಿ ಪುಲ್ಲಿಂಗಶಬ್ದ ಹೇಗೆ ಬಳಸಿದ್ದಾರೆ ? ಎಂಬ ಶಂಕೆಗೆ ಅವಕಾಶವಿಲ್ಲ.

ಕಾರಣ - 'ಪುಲ್ಲಿಂಗೇನೋಚ್ಯತೇ ಶ್ರೀಶ್ಚ ಪುಂವಚ್ಛಕ್ತಿಮತೀ ಯತಃ ' ಎಂಬುದಾಗಿ ಹೇಳಿದಂತೆ ಲಕ್ಷ್ಮೀದೇವಿ ತಾನು ಸ್ತ್ರೀ ಆಗಿದ್ದರೂ ಪುರುಷರಂತೆ ಶಕ್ತಿ ಉಳ್ಳವಳಾದ್ದರಿಂದ ಅವಳಿಗೆ ಪುಲ್ಲಿಂಗಶಬ್ದವಾಚ್ಯತ್ವವು ಉಪಪನ್ನವಾಗಿದೆ ಎಂದು ಭಾವ.

**ಟೀಕಾ :- ತತಃ ಕಿಮಿತ್ಯತ ಆಹ -**

**- ಮಾಯಾವಾದಖಂಡನ -**

**ಉತ್ತಮಃ ಪುರುಷಸ್ತ್ವನ್ಯಃ .....**

**ಅನ್ಯಃ ಕ್ಷರಾಕ್ಷರಾಭ್ಯಾಮ್ । ನ ತ್ವನಯೋರೇವೈಕಃ ಪುರುಷೋತ್ತಮಃ ಕಲ್ಪ್ಯತ ಇತಿ ಭಾವಃ ।**

**ಅನುವಾದ :-** ಬ್ರಹ್ಮಾದಿಜೀವರು ಕ್ಷರಪುರುಷರು. ರಮಾ ಅಕ್ಷರಪುರುಷಳಾಗಿದ್ದಾಳೆ ಸರಿ. ಮುಂದೇನು ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಹೇಳುತ್ತಾರೆ -

**ಉತ್ತಮಃ ಪುರುಷಸ್ತ್ವನ್ಯಃ .....** (ಮೂಲ)

ಕ್ಷರ-ಅಕ್ಷರ ಪುರುಷರಿಂದ ಭಿನ್ನನಾದ ಒಬ್ಬನು ಉತ್ತಮ ಪುರುಷನಾಗಿದ್ದಾನೆ. ಹೊರತು ಈ ಕ್ಷರ-ಅಕ್ಷರ ಪುರುಷರಲ್ಲಿಯೇ ಒಬ್ಬನು ಪುರುಷೋತ್ತಮನಾಗಿದ್ದಾನೆ ಎಂದು ಕಲ್ಪಿಸುವುದಿಲ್ಲ ಎಂದು ಭಾವ.

**ಟೀಕಾ :- ಅನ್ಯಸ್ಯೋತ್ತಮಪುರುಷತ್ವೇ ಶ್ರುತ್ಯಾದಿಸಂಮತಿಮಾಹ -**

**- ಮಾಯಾವಾದಖಂಡನ -**

..... ಪರಮಾತ್ಮೇತ್ಯುದಾಹೃತಃ ।

**ಆತ್ಮಶಬ್ದೋಽತ್ರ ಚೇತನಪರ್ಯಾಯಃ ।**

**ಅನುವಾದ :-** ಕ್ಷರ-ಅಕ್ಷರ ಪುರುಷರಿಂದ ಭಿನ್ನನಾದವನು ಉತ್ತಮಪುರುಷನಾಗಿದ್ದಾನೆ ಎಂಬುದಾಗಿ 'ಪರಮಾತ್ಮಾ ವ್ಯವಸ್ಥಿತಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ಮೂಲಾರ್ಥ.

ಮೂಲದಲ್ಲಿ ಆತ್ಮಶಬ್ದವು ಚೇತನಶಬ್ದಪರ್ಯಾಯವಾಗಿದೆ. (ಆತ್ಮಶಬ್ದಕ್ಕೆ ಚೇತನ ಎಂದು ಅರ್ಥ.)

**ವಿವರಣೆ :-** ನಿರ್ಣೀತಸ್ಥಳದಲ್ಲಿ ಸಮಾನೋಕ್ತಿಯು ಸಮಾಖ್ಯಾ ಎನಿಸುತ್ತದೆ. ಈ ಶ್ರುತಿಯು ಇದಕ್ಕೆ ಸಮಾಖ್ಯಾ ಎಂದರೆ, ಅರ್ಥಸಮಾಖ್ಯಾವೋ ? (ಸಮಾನ ಅರ್ಥ ಉಳ್ಳ ಉಕ್ತಿಯೋ ?) ಶಬ್ದಸಮಾಖ್ಯಾವೋ ? (ಸಮಾನಶಬ್ದಗಳಿಂದ ಕೂಡಿದ ಉಕ್ತಿಯೋ ?)

ಒಂದುವೇಳೆ ಇದು ಅರ್ಥಸಮಾಖ್ಯಾ ಆಗಿದ್ದರೆ ಆಗ 'ಪರಮಚೇತನಃ' ಎಂದು ಹೇಳಬೇಕಿತ್ತು. ಒಂದುವೇಳೆ ಇದು ಶಬ್ದಸಮಾಖ್ಯಾ ಆಗಿದ್ದರೆ ಆಗ 'ಪರಮಪುರುಷಃ' ಎಂದು ಹೇಳಬೇಕಿತ್ತು. ಆದರೆ ಆತ್ಮಾ (ಪರಮಾತ್ಮಾ) ಎಂದು ಹೇಗೆ ಹೇಳಲಾಗಿದೆ ? ಅಸಂಗತವಾಗುವುದಿಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಟೀಕಾಕೃತ್ಪಾದರು ''ಆತ್ಮಶಬ್ದೋಽತ್ರ ಚೇತನಪರ್ಯಾಯಃ'' ಎಂದು ಹೇಳಿದರು. ಮೂಲದಲ್ಲಿರುವ ಆತ್ಮಶಬ್ದಕ್ಕೆ ಚೇತನ ಎಂದು ಅರ್ಥ. ಹಾಗಾದರೆ ಇದು ಅರ್ಥಸಮಾಖ್ಯಾ ಆಗಿದೆ ಎಂದು ಹೇಳಿದಂತಾಗುತ್ತದೆ.

**ಟೀಕಾ :- ಯುಕ್ತಿಂ ಚಾಹ -**

**- ಮಾಯಾವಾದಖಂಡನ -**

**ಯೋ ಲೋಕತ್ರಯಮಾವಿಶ್ಯ ಬಿಭರ್ತಿ ...।**

**ಯೋ ಹಿ ಯಸ್ಯ ಭರ್ತಾ ಸ ತಸ್ಮಾದುತ್ತಮೋ ಯುಕ್ತಃ ।**

**ಅನುವಾದ :-** ಕ್ಷರ-ಅಕ್ಷರ ಪುರುಷರಿಂದ ಭಿನ್ನನಾದವನು ಉತ್ತಮಪುರುಷನಾಗಿದ್ದಾನೆ ಎಂಬ ವಿಷಯದಲ್ಲಿ ಶ್ರುತ್ಯಾದಿಸಮ್ಮತಿಯನ್ನು ಹೇಳಿ ಪ್ರಕೃತ ಯುಕ್ತಿಯನ್ನೂ ಹೇಳುತ್ತಾರೆ -

**ಯೋ ಲೋಕತ್ರಯಮಾವಿಶ್ಯ ಬಿಭರ್ತಿ ....** (ಮೂಲ)

ಯಾವನು ಮೂರುಲೋಕಗಳನ್ನು ಪ್ರವೇಶ ಮಾಡಿ ಧಾರಣೆ ಮಾಡುತ್ತಾನೆಯೋ (ಅವನು ಪುರುಷೋತ್ತಮ) ಎಂದು ಮೂಲಾರ್ಥ.

ಯಾವನು ಯಾರನ್ನು ಭರಿಸುತ್ತಾನೆ ಅವನು ಅವರಿಗಿಂತ ಉತ್ತಮನಾಗುವುದು ಸಮಂಜಸ. ಪ್ರಕೃತ ಪರಮಾತ್ಮನು ಒಬ್ಬರನ್ನಲ್ಲ ಇಬ್ಬರನ್ನಲ್ಲ ಮೂರು ಲೋಕಗಳಲ್ಲಿಯೂ ಪ್ರವೇಶ ಮಾಡಿ ಮೂರು ಲೋಕಗಳನ್ನೂ ಭರಿಸುತ್ತಾನಾದ್ದರಿಂದ ಪರಮಾತ್ಮನು

ಉತ್ತಮಪುರುಷನಾಗಿದ್ದಾನೆ (ಸರ್ವೋತ್ತಮನಾಗಿದ್ದಾನೆ) ಎಂಬುದಾಗಿ ಪುರುಷೋತ್ತಮತ್ವವು ಯುಕ್ತಿಸಿದ್ಧವೂ ಆಗಿದೆ ಎಂದು ಭಾವ.

**ಟೀಕಾ :- ಆವಿಷ್ಟಸ್ಯ ತನ್ನಾಶೇ ನಾಶಪ್ರಸಂಗ ಇತ್ಯತ ಆಹ -**

**- ಮಾಯಾವಾದಖಂಡನ -**

**..... ಅವ್ಯಯಃ ....**

**ಟೀಕಾ :- ತತ್ ಕಥಂ ? ಐಶ್ವರ್ಯಾದಿತ್ಯಾಹ -**

**- ಮಾಯಾವಾದಖಂಡನ -**

**.... ಈಶ್ವರಃ ......**

**ಅನುವಾದ :-** ಮನೆಯು ದಹನವಾಗುವಾಗ ದಹ್ಯಮಾನಗೃಹಾಂತರ್ಗತನಾದ ಪುರುಷನೂ ನಾಶವಾಗುವ ಹಾಗೆ ಲೋಕಗಳು ನಾಶವಾಗುವಾಗ ಲೋಕತ್ರಯಾಂತರ್ಗತನಾದ ಭಗವಂತನೂ ನಾಶವಾಗಬೇಕಾದ ಪ್ರಸಂಗ ಬರುವುದಲ್ಲ ? ಎಂದು ಶಂಕೆ ಬಂದರೆ, ಆದಕ್ಕಾಗಿ ಹೇಳಿದರು -

**ಅವ್ಯಯಃ** (ಮೂಲ)

ಲೋಕಗಳು ನಾಶವಾದರೂ ಲೋಕತ್ರಯಾಂತರ್ಗತನಾದ ಭಗವಂತನು ನಾಶವಾಗುವುದಿಲ್ಲ, ಕಾರಣ ಭಗವಂತನು ನಾಶರಹಿತನಾಗಿದ್ದಾನೆ. ಭಗವಂತನಿಗೆ (ಅವ್ಯಯತ್ವವೇ) ನಾಶರಹಿತತ್ತ್ವವೇ ಹೇಗಿದೆ ? ಎಂದರೆ, ಭಗವಂತನು ಅಘಟಿತ ಘಟಕಶಕ್ತಿಸಂಪನ್ನನಾದ್ದರಿಂದ ಅವನಿಗೆ ಅವ್ಯಯತ್ವವು ಉಪಪನ್ನ ಎಂದು ಹೇಳುತ್ತಾರೆ-

**ಈಶ್ವರಃ** (ಮೂಲ)

ಭಗವಂತನು ಈಶ್ವರನಾಗಿದ್ದಾನೆ. (ಅಘಟಿತಘಟಕಶಕ್ತಿಸಂಪನ್ನನಾಗಿದ್ದಾನೆ.) ಹೀಗಾಗಿ ಮನೆಯು ದಹನವಾದರೂ ಗೃಹಾಂತರ್ಗತನಾದ ಪುರುಷನು ಅಗ್ನಿಸ್ತಂಭವಿದ್ಯಾ ಉಳ್ಳವನಾಗಿದ್ದರೆ ಹೇಗೆ ಅವನಿಗೆ ದಾಹ ಆಗುವುದಿಲ್ಲವೋ ಆದರಂತೆ ಲೋಕಗಳು ನಾಶವಾದರೂ ಲೋಕತ್ರಯಾಂತರ್ಗತನಾದ ಭಗವಂತನು ಅಘಟಿತಘಟಕಶಕ್ತಿ ಸಂಪನ್ನನಾದ್ದರಿಂದ ಅವನಿಗೆ ನಾಶ ಪ್ರಸಕ್ತವಾಗುವುದಿಲ್ಲ ಎಂದು ಭಾವ.

**ಟೀಕಾ :- ಸ ಚ ಕಃ ? ಇತ್ಯತೋಽಹಮೇವೇತಿ ಸಪ್ರಮಾಣಕಮಾಹ -**

**- ಮಾಯಾವಾದಖಂಡನ -**

**ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**

**ಕ್ಷರಂ ಚಾತೀತ ಇತಿ ಚಶಬ್ದಾನ್ವಯಃ । ಲೋಕಶಬ್ದೇನ ಪೌರುಷೇಯಾಗಮ ಉಚ್ಯತೇ ।**

**ಅನುವಾದ :-** ಕ್ಷರ-ಅಕ್ಷರಪುರುಷರಿಂದ ಭಿನ್ನನಾದ ಒಬ್ಬನು ಉತ್ತಮಪುರುಷನಾಗಿದ್ದಾನೆ ಎಂದು ತಿಳಿಸಿದ್ದು ಸರಿಯೇ. ಆದರೆ ಆ ಕ್ಷರ-ಅಕ್ಷರಪುರುಷರಿಂದ ಭಿನ್ನನಾದ ಉತ್ತಮಪುರುಷನಾದ ಆ ವ್ಯಕ್ತಿ ಯಾರು ? ಎಂದು ಪ್ರಶ್ನೆ ಬಂದರೆ, ನಾನೇ ಆ ಉತ್ತಮಪುರುಷ ಎಂಬುದನ್ನು ಪ್ರಮಾಣಪುರಸ್ಸರವಾಗಿ ಭಗವಂತನು ಹೇಳುತ್ತಾನೆ -

**ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**(ಮೂಲ)

ಚಶಬ್ದ-ಅಪಿಶಬ್ದಗಳು ಒಂದೇ ಅರ್ಥ ಉಳ್ಳದ್ದಾದ್ದರಿಂದ ಒಂದು ಶಬ್ದ ಸಾಕು ಎಂಬುದಾಗಿ ಅನ್ಯತರವೈಯರ್ಥ್ಯಶಂಕೆ ಬಂದರೆ, ಅದಕ್ಕಾಗಿ ಅವುಗಳಿಗೆ ಅನ್ವಯ ತೋರಿಸುತ್ತಾರೆ - ''ಕ್ಷರಂ ಚಾತೀತ ಇತಿ ಚಶಬ್ದಾನ್ವಯಃ'' ಎಂದು. 'ಕ್ಷರಂ ಚ ಅತೀತಃ' ಎಂಬುದಾಗಿ ಚಶಬ್ದವನ್ನು ಕ್ಷರಶಬ್ದದ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು. 'ಅಕ್ಷರಾದಪಿ ಉತ್ತಮಃ' ಎಂಬುದಾಗಿ ಅಪಿಶಬ್ದವನ್ನು ಅಕ್ಷರಶಬ್ದದ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು. ಆದ್ದರಿಂದ ಅನ್ಯತರವೈಯರ್ಥ್ಯಶಂಕೆಗೆ ಅವಕಾಶವಿಲ್ಲ ಎಂದು ಭಾವ.

'ಲೋಕೇ ವೇದೇ ಚ' ಎಂಬ ಮೂಲದಲ್ಲಿ ಲೋಕಶಬ್ದದಿಂದ ಪೌರುಷೇಯ ಆಗಮವನ್ನು ಸ್ವೀಕರಿಸಬೇಕು. (ವೇದಶಬ್ದದಿಂದ ಅಪೌರುಷೇಯ ಆಗಮವನ್ನು ಸ್ವೀಕರಿಸಬೇಕು.)

ಹಾಗಾದರೆ - ಯಸ್ಮಾತ್=ಯಾವ ಕಾರಣ ಅಹಂ=ನಾನು ಕ್ಷರಂ ಚಾತೀತಃ=ಕ್ಷರಪುರುಷರನ್ನೂ ಮೀರಿದ್ದೇನೆ ಅಕ್ಷರಾದಪಿ ಉತ್ತಮಃ=ಅಕ್ಷರಪುರುಷಳಾದ ಲಕ್ಷ್ಮೀದೇವಿಗಿಂತಲೂ ಉತ್ತಮನಾಗಿದ್ದೇನೆಯೋ ಅತಃ=ಆ ಕಾರಣ ಲೋಕೇ= ಪೌರುಷೇಯ ಆಗಮದಲ್ಲಿ ಚ=ಮತ್ತು ವೇದೇ=ಅಪೌರುಷೇಯ ಆಗಮದಲ್ಲಿ ಪುರುಷೋತ್ತಮಃ=ಪುರುಷೋತ್ತಮನಾಗಿದ್ದಾನೆ ಎಂಬುದಾಗಿ ಪ್ರಥಿತಃ ಅಸ್ಮಿ= ಪ್ರಸಿದ್ಧನಾಗಿದ್ದೇನೆ ಎಂದು ಮೂಲಾರ್ಥವಾಗುತ್ತದೆ.

**ಟೀಕಾ :- ತಾತ್ಪರ್ಯದ್ಯೋತನಾಯ ವೇತ್ತುಃ ಫಲಮಾಹ -**

**- ಮಾಯಾವಾದಖಂಡನ -**

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥**

**[33] ಏವಮಿತ್ಯಸ್ಯ ವ್ಯಾವೃತ್ತಿನಿರಾಸಃ ಅಸಂಮೂಢ ಇತಿ । ನ ಪುನರಶ್ವಕರ್ಣಾದಿವತ್ ಸಂಜ್ಞಾಮಾತ್ರತ್ವೇನೇತ್ಯರ್ಥಃ । ಸ ಸರ್ವವಿತ್, ಅಸ್ಯೈವ ಸರ್ವಶಾಸ್ತ್ರಾರ್ಥತ್ವಾತ್ । ಸರ್ವಭಾವೇನ ಸರ್ವಪ್ರಕಾರೇಣ ।**

**ಅನುವಾದ :-** 'ತಾನು ಪುರುಷೋತ್ತಮನಾಗಿದ್ದೇನೆ ' ಎಂದು ತಿಳಿಸುವುದರಲ್ಲಿ ವೇದಶಾಸ್ತ್ರಗಳಿಗೆ ತಾತ್ಪರ್ಯವೂ ಇದೆ ಎಂಬುದನ್ನು ತಿಳಿಸುವುದಕ್ಕಾಗಿ ತನ್ನನ್ನು ಪುರುಷೋತ್ತಮನೆಂದು ತಿಳಿಯುವವರಿಗೆ ಆಗುವ [34] ಫಲವನ್ನು ಹೇಳುತ್ತಾನೆ -

---

33 ಏವಮಿತ್ಯಸ್ಯ ವ್ಯಾವೃತ್ತಿನಿರಾಸ ಇತಿ ॥ ಪುರುಷೋತ್ತಮ ಇತ್ಯಸ್ಯ ಯಸ್ಮಾತ್ ಕ್ಷರಮತೀತೋಽಹಮಿತ್ಯಾದಿನಾ ಯೌಗಿಕೋಽರ್ಥ ಉಕ್ತಃ । ಸ ಏವಮಿತ್ಯನೇನ ಪರಾಮೃಶ್ಯತೇ । ಏವಂ ಚ ಏವಮಿತ್ಯಸ್ಯ ಯೌಗಿಕಾರ್ಥಸ್ಯ ವ್ಯಾವೃತ್ತಿರ್ನಾಮ ರೂಢಿಃ । ತನ್ನಿರಾಸೋಽಸಂಮೂಢ ಇತ್ಯನೇನ ಕ್ರಿಯತೇ । ತಥಾ ಚೈವಮಸಂಮೂಢಪದಾಭ್ಯಾಂ ಇತ್ಯುಕ್ತಂ ಭವತಿ । ತದ್ವ್ಯಾವರ್ತ್ಯಂ ದರ್ಶಯತಿ ॥ ನ ತ್ವಶ್ವಕರ್ಣಾದಿವದಿತಿ ॥ ಸಂಜ್ಞಾಮಾತ್ರತ್ವೇನೇತಿ ॥ ರೂಢಿಮಾತ್ರತ್ವೇನೇತ್ಯರ್ಥಃ । (ಶ್ರೀನಿವಾಸತೀರ್ಥಾಯಾ)

34) ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ ।
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥
ಎಂಬ ವಚನಾನುಸಾರವಾಗಿ ಫಲವೂ ತಾತ್ಪರ್ಯಕ್ಕೆ ದ್ಯೋತಕವಾದ್ದರಿಂದ ಫಲವನ್ನು ಹೇಳುತ್ತಾನೆ ಎಂದು ಅಭಿಪ್ರಾಯ.

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ।।** (ಮೂಲ)

'ಏವಂ' ಎಂಬುದರ ವ್ಯಾವೃತ್ತಿಯನ್ನು ನಿರಾಸ ಮಾಡುತ್ತಾರೆ 'ಅಸಂಮೂಢಃ' ಎಂಬ ಪದದಿಂದ. ಅದರ ಅಭಿಪ್ರಾಯ ಹೀಗಿದೆ ః- ಪುರುಷೋತ್ತಮ ಎಂಬುದಕ್ಕೆ 'ಯಸ್ಮಾತ್ ಕ್ಷರಮತೀತೋऽಹಂ' ಇತ್ಯಾದಿಯಾಗಿ ಯೌಗಿಕ ಅರ್ಥವನ್ನು ಹೇಳಿದರು. ಆ ಯೌಗಿಕಾರ್ಥವು 'ಏವಂ' ಎನ್ನುವುದರಿಂದ ಪರಾಮರ್ಶಿಸಲ್ಪಡುತ್ತದೆ. ಹೀಗಾಗಿ 'ಏವಂ' ಎನ್ನುವುದರ ಯೌಗಿಕಾರ್ಥದ ವ್ಯಾವೃತ್ತಿ ಎಂದರೆ ರೂಢಿ. ಆ ರೂಢಿವೃತ್ತಿಯನ್ನು ನಿರಾಸ ಮಾಡುತ್ತಿದ್ದಾನೆ 'ಅಸಂಮೂಢಃ' ಎಂಬ ಪದದಿಂದ. ಈ ರೀತಿಯಾಗಿ ಯೋಗವೃತ್ತಿಯಿಂದ ಪುರುಷೋತ್ತಮನಾಗಿದ್ದಾನೆ ಎಂದು ತಿಳಿಯಬೇಕೇ ಹೊರತು ಅಶ್ವಕರ್ಣ ಮೊದಲಾದ ಶಬ್ದಗಳಂತೆ ರೂಢಿಮಾತ್ರದಿಂದ ಪುರುಷೋತ್ತಮನಾಗಿದ್ದಾನೆ ಎಂದು ತಿಳಿಯಬಾರದು ಎಂದು ಭಾವ.

ಹೀಗೆ ಯೋಗವೃತ್ತಿಯಿಂದ ಯಾರು ನನ್ನನ್ನು ಪುರುಷೋತ್ತಮನೆಂದು ತಿಳಿಯುತ್ತಾರೋ ಅವನು ಎಲ್ಲವನ್ನೂ ತಿಳಿದಂತೆ. ಕಾರಣ ಭಗವಂತನ ಪುರುಷೋತ್ತಮತ್ವವೇ (ಸರ್ವೋತ್ತಮತ್ವವೇ) ಸರ್ವಶಾಸ್ತ್ರಾರ್ಥವಾದ್ದರಿಂದ. ಮೂಲದಲ್ಲಿ 'ಸರ್ವಭಾವೇನ' ಎಂಬ ಪದಕ್ಕೆ 'ಸರ್ವಪ್ರಕಾರೇಣ' ಎಂದು ಅರ್ಥ.

ಹಾಗಾದರೆ -

ಯಃ=ಯಾವನು ಏವಂ ಅಸಂಮೂಢಃ=ಕ್ಷರ,ಅಕ್ಷರ ಪುರುಷರಿಗಿಂತಲೂ ಉತ್ತಮನಾದ ಕಾರಣ ಪುರುಷೋತ್ತಮನು ಎಂಬುದಾಗಿ ಯೋಗವೃತ್ತಿಯಿಂದ (ಹೊರತು ರೂಢಿವೃತ್ತಿಯಿಂದ ಅಲ್ಲ) ಮಾಂ ಪುರುಷೋತ್ತಮಂ ಜಾನಾತಿ=ನನ್ನನ್ನು ಪುರುಷೋತ್ತಮನೆಂದು ತಿಳಿಯುತ್ತಾನೆಯೋ ಸಃ=ಅವನು ಸರ್ವವಿತ್=ಎಲ್ಲ ಶಾಸ್ತ್ರಗಳನ್ನೂ ತಿಳಿದವನಾಗುತ್ತಾನೆ. (ಭಗವಂತನ ಪುರುಷೋತ್ತಮತ್ವವೇ ಸರ್ವಶಾಸ್ತ್ರಾರ್ಥವಾದ್ದರಿಂದ ಇದನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆ ಎಂದು ಭಾವ.) ಸಃ=ಅವನು ಮಾಂ=ನನ್ನನ್ನು ಸರ್ವಭಾವೇನ=ಸರ್ವಪ್ರಕಾರಗಳಿಂದಲೂ ಭಜತಿ=ಸೇವಿಸುತ್ತಾನೆ ಎಂದು ಮೂಲಾರ್ಥವಾಗುತ್ತದೆ.

**ಟೀಕಾ :- ಏತಚ್ಚ ನ ಯಸ್ಮೈ ಕಸ್ಮೈ ವಾಚ್ಯಮಿತ್ಯಾಹ -**

**- ಮಾಯಾವಾದಖಂಡನ -**

## ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।

**ಟೀಕಾ :- ಸ ಸರ್ವವಿದಿತ್ಯಾದ್ಯುಕ್ತಮ್ ।**

**ಅನುವಾದ :-** ಇದನ್ನು ಯಾರಿಗೆ ಬೇಕಾದರೂ ಹೇಳಬಾರದು ಎಂದು ತಿಳಿಸುತ್ತಾನೆ-

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।** (ಮೂಲ)

ಮೂಲದಲ್ಲಿ 'ಇದಮುಕ್ತಂ' ಎಂದರೆ 'ಸ ಸರ್ವವಿತ್' ಇತ್ಯಾದಿಯಾಗಿ ಹೇಳಿದ್ದು ಎಂದು ಅರ್ಥ. ಹಾಗಾದರೆ - ಹೇ ಅನಘ ! ಅರ್ಜುನನೇ ! ಇತಿ=ಈ ಪ್ರಕಾರವಾಗಿ ಮಯಾ ಉಕ್ತಂ=ಸ ಸರ್ವವಿತ್ ಇತ್ಯಾದಿಯಾಗಿ ನಾನು ಹೇಳಿದ ಇದಂ=ಈ ವಿಚಾರವು ಗುಹ್ಯತಮಂ ಶಾಸ್ತ್ರಂ=ಅತ್ಯಂತ ರಹಸ್ಯವಾದ ಶಾಸ್ತ್ರವಿಚಾರವಾಗಿದೆ ಎಂದು ಮೂಲಾರ್ಥವಾಗುತ್ತದೆ.

**ಟೀಕಾ :- ತತಃ ಕಿಮ್ ? ಇತ್ಯತ ಆಹ -**

**- ಮಾಯಾವಾದಖಂಡನ -**

## ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ।

**ಬುದ್ಧಿಮಾನ್ ಅಪರೋಕ್ಷಜ್ಞಾನೀ । ಕೃತಕೃತ್ಯೋ ಮುಕ್ತಃ ।**

**ಅನುವಾದ :-** ನೀನು ತಿಳಿಸಿದ ವಿಚಾರ ಅತ್ಯಂತ ರಹಸ್ಯವಾಗಿದೆ ಸರಿ. ಮುಂದೇನು ? ಎಂದರೆ, ಅದಕ್ಕೆ ಹೇಳುತ್ತಾನೆ -

**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ।** (ಮೂಲ)

ಮೂಲದಲ್ಲಿ 'ಬುದ್ಧಿಮಾನ್' ಎಂದರೆ ಅಪರೋಕ್ಷಜ್ಞಾನೀ ಎಂದರ್ಥ. 'ಕೃತಕೃತ್ಯಃ' ಎಂದರೆ ಮುಕ್ತ ಎಂದರ್ಥ. ಹಾಗಾದರೆ -

ಏತತ್=ಈ ರಹಸ್ಯವಿಚಾರವನ್ನು ಬುದ್ಧ್ವಾ=ಶಾಸ್ತ್ರಗಳಿಂದ ತಿಳಿದು (ಪರೋಕ್ಷಜ್ಞಾನ ಸಂಪಾದಿಸಿ) ಬುದ್ಧಿಮಾನ್ ಸ್ಯಾತ್=ಅಪರೋಕ್ಷಜ್ಞಾನಿಯಾಗುತ್ತಾನೆ. ಅನಂತರ ಕೊನೆಗೆ ಕೃತಕೃತ್ಯಶ್ಚ ಸ್ಯಾತ್=ಮುಕ್ತನೂ ಆಗುತ್ತಾನೆ ಎಂದು ಮೂಲಾರ್ಥವಾಗುತ್ತದೆ.

## - ಮಾಯಾವಾದಖಂಡನ -

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ।
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥

**ಟೀಕಾ :- ಆತ್ಮಾ ಮಹಾನಿತಿ ಸಾಮಾನಾಧಿಕರಣ್ಯಮ್ । ನ ಪರಂ ಕಿಂಚಿತ್ । ಕಿಂತು ? ಸಾ ಕಾಷ್ಠಾ ಸ ಏವಾವಧಿಃ । ಕುತ ಏತತ್ ? ಸಾ ಪರಾ ಗತಿಃ , ಗಮ್ಯತ ಇತಿ ಗತಿಃ ।**

**ಅನುವಾದ :-** ಮೂಲದಲ್ಲಿ 'ಬುದ್ಧೇರಾತ್ಮಾ ಮಹಾನ್ ಪರಃ' ಎನ್ನುವಲ್ಲಿ 'ಬುದ್ಧೇಃ ಆತ್ಮಾ ಪರಃ , ಆತ್ಮನಶ್ಚ ಮಹಾನ್ ಪರಃ' ಎಂಬುದಾಗಿ (ವೈಯಧಿಕರಣ್ಯೇನ) ವ್ಯಧಿಕರಣವಾಗಿ ಯೋಜನೆ ಮಾಡಿಕೊಳ್ಳಬೇಕೆ ? ಎಂದು ಶಂಕೆ ಬಂದರೆ, ಅದಕ್ಕೆ ಟೀಕಾಕೃತ್ಪಾದರು ಯೋಜನೆಯನ್ನು ತೋರಿಸಿದರು - 'ಆತ್ಮಾ ಮಹಾನ್ ಇತಿ ಸಾಮಾನಾಧಿಕರಣ್ಯಮ್' ಎಂದು. ಆತ್ಮಶಬ್ದವಾಚ್ಯರಾದ ಬ್ರಹ್ಮದೇವರಿಗೆ 'ಮಹಾನ್' ಎನ್ನುವುದು ವಿಶೇಷಣವಾಗಿದೆ ಎಂದು ಭಾವ.

'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬ ಶ್ರುತಿಯಲ್ಲಿ ಇಂದ್ರಿಯಾದಿಶಬ್ದಗಳು ಅಭಿಮಾನ್ಯಧಿಕರಣನ್ಯಾಯದಿಂದ ತತ್ತದಭಿಮಾನಿದೇವತಾಪರವಾಗಿವೆ ಎಂದು ತಿಳಿಯಬೇಕು. ಹಾಗಾದರೆ -

ಇಂದ್ರಿಯೇಭ್ಯಃ=ಇಂದ್ರಿಯಾಭಿಮಾನಿದೇವತೆಗಳಿಗಿಂತಲೂ ಅರ್ಥಾಃ= ಅರ್ಥಾಭಿಮಾನಿದೇವತೆಗಳು ಪರಾಃ=ಉತ್ತಮರಾಗಿದ್ದಾರೆ. ಅರ್ಥೇಭ್ಯಶ್ಚ= ಅರ್ಥಾಭಿಮಾನಿದೇವತೆಗಳಿಗಿಂತಲೂ ಮನಃ=ಮನೋಭಿಮಾನಿಗಳಾದ ರುದ್ರದೇವರು ಪರಂ=ಉತ್ತಮರಾಗಿದ್ದಾರೆ. ಮನಸಃ=ಮನೋಭಿಮಾನಿಗಳಾದ ರುದ್ರದೇವರಿಗಿಂತಲೂ ಬುದ್ಧಿಃ=ಬುದ್ಧಿತತ್ತ್ವಾಭಿಮಾನಿನಿಯಾದ ಸರಸ್ವತಿಯು ಪರಾ=ಉತ್ತಮಳಾಗಿದ್ದಾಳೆ. ಬುದ್ಧೇಃ=ಬುದ್ಧಿತತ್ತ್ವಾಭಿಮಾನಿನಿಯಾದ ಸರಸ್ವತಿಗಿಂತಲೂ ಮಹಾನ್= ಮಹತ್‌ತತ್ತ್ವಾಭಿಮಾನಿಗಳಾದ ಆತ್ಮಾ=ಬ್ರಹ್ಮದೇವರು ಪರಃ=ಉತ್ತಮರಾಗಿದ್ದಾರೆ. ಮಹತಃ=ಮಹತತ್ತ್ವಾಭಿಮಾನಿಗಳಾದ ಬ್ರಹ್ಮದೇವರಿಗಿಂತಲೂ ಅವ್ಯಕ್ತಂ=

ಮಹಾಲಕ್ಷ್ಮೀದೇವಿಯು ಪರಂ=ಉತ್ತಮಳಾಗಿದ್ದಾಳೆ. ಅವ್ಯಕ್ತಾತ್=ಮಹಾಲಕ್ಷ್ಮೀ-ದೇವಿಗಿಂತಲೂ ಪುರುಷಃ=ನಾರಾಯಣನು ಪರಃ=ಉತ್ತಮನಾಗಿದ್ದಾನೆ.

ಪುರುಷಾತ್ ಪರಂ=ನಾರಾಯಣನಿಗಿಂತಲೂ ಉತ್ತಮವಾದದ್ದು ಕಿಂಚಿತ್ ನ=ಯಾವುದೂ ಇಲ್ಲ. ಕಿಂತು ? ಸಾ ಕಾಷ್ಠಾ=ಆ ನಾರಾಯಣನೇ ಅವಧಿಯಾಗಿದ್ದಾನೆ. (ತಾರತಮ್ಯದ ಅಂತಮವ್ಯಕ್ತಿಯಾಗಿದ್ದಾನೆ.) ತಾರತಮ್ಯಾಂತರ್ಗತತತ್ವರೂಪವಾದ ಅವಧಿತ್ವವನ್ನು ಯಾವ ಪ್ರಮಾಣದಿಂದ ತಿಳಿಯಬೇಕು ? ಸಾ ಪರಾ ಗತಿಃ=(ಗಮ್ಯತೇ ಅವಗಮ್ಯತೇ ಇತಿ ಗತಿಃ ಎಂದು ಸಮಾಸ ಮಾಡಿಕೊಂಡು) ಆ ನಾರಾಯಣನೇ ಎಲ್ಲ ಶಾಸ್ತ್ರಗಳಿಂದಲೂ ಅವಗಮ್ಯನಾಗಿದ್ದಾನೆ (ಜ್ಞೇಯನಾಗಿದ್ದಾನೆ) ಎಂದು ಮೂಲಾರ್ಥವಾಗುತ್ತದೆ.

**ಟೀಕಾ :- ಏವಂ ಸರ್ವಶಾಸ್ತ್ರೈಃ ಪ್ರತಿಪಾದ್ಯತ ಇತ್ಯಾಹ -**

## - ಮಾಯಾವಾದಖಂಡನ -

ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ।

**ಸರ್ವಗುಣೇಷು [35]ಭೂಮಗುಣಸ್ಯ ಜ್ಯಾಯಸ್ತ್ವಂ ಮುಖ್ಯತೋ ವೇದಪ್ರತಿಪಾದ್ಯತ್ವಮಿತಿ ಸೂತ್ರಾರ್ಥೋಽತ್ರಾಭಿಮತಃ ।**

**[36]ಇತಿ ವಿಷ್ಣೋಃ ಸರ್ವೋತ್ತಮತ್ವಮೇವ ಶಾಸ್ತ್ರಾರ್ಥತ್ವೇನ ಭಗವತಾ ಶ್ರುತ್ಯಾ ಚಾಭಿಹಿತಮ್[37] ।**

---

35) ಭೂಮಗುಣಸ್ಯೇತಿ ॥ ಸರ್ವೋತ್ತಮತ್ವರೂಪಪೂರ್ಣತ್ವಾಖ್ಯಭೂಮಗುಣಸ್ಯ ಇತ್ಯರ್ಥಃ । (ಶ್ರೀನಿ)

36) ಅತ್ರ 'ಇತಿ ವಿಷ್ಣೋಃ' ಇತಿ ವಾಕ್ಯಂ ಟೀಕಾಕಾರಾಣಾಮೇವ, ನ ಭಗವತ್ಪಾದವಾಕ್ಯಂ, ಕ್ವಚಿನ್ಮೂಲಕೋಶೇ ಪಾಠಾದರ್ಶನಾದಿತಿ ಕೇಚಿತ್ ಸಾಂಪ್ರದಾಯಿಕಾ ಆಹುಃ । ಬಹುಮೂಲಕೋಶೇಷು ಪಾಠದರ್ಶನಾತ್ ಭಗವತ್ಪಾದೀಯಂ ವಾಕ್ಯಮೇವೇತಿ ಬಹವಃ ಸಾಂಪ್ರದಾಯಿಕಾ ಇತಿ ಜ್ಞಾತವ್ಯಮ್ । (ಶ್ರೀನಿ)

37) ಶ್ರುತ್ಯಾ ಚಾಭಿಹಿತಮಿತ್ಯನಂತರಂ ತದೇವ ವೇದಾದಿಪ್ರತಿಪಾದ್ಯಂ ನ ಬ್ರಹ್ಮಾತ್ಮೈಕ್ಯಮಿತ್ಯುಕ್ತರೀತ್ಯಾ ಶೇಷೋ ದ್ರಷ್ಟವ್ಯಃ । (ಶ್ರೀನಿ)

**ಅನುವಾದ :-** ನಾನು (ಸರ್ವೋತ್ತಮನಾಗಿದ್ದೇನೆ) ಉತ್ತಮಪುರುಷನಾಗಿದ್ದೇನೆ ಎಂಬುದಾಗಿ ಕೇವಲ ನಾನಷ್ಟೇ ಹೇಳುವುದಲ್ಲ. ಕಿಂತು ಈ ರೀತಿಯಾಗಿ ಸರ್ವಶಾಸ್ತ್ರಗಳಿಂದಲೂ ಪ್ರತಿಪಾದ್ಯವಾಗಿದೆ ಎಂದು ಹೇಳುತ್ತಾರೆ -

**ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ।** (ಮೂಲ)

ಭಗವಂತನ ಎಲ್ಲ ಗುಣಗಳಲ್ಲಿ ಭೂಮ್ನಃ = ಸರ್ವೋತ್ತಮತ್ವರೂಪ ಪೂರ್ಣತ್ವ ಎಂಬ ಭೂಮಗುಣಕ್ಕೆ ಜ್ಯಾಯಸ್ತ್ವಂ = ಮುಖ್ಯವಾಗಿ ವೇದಪ್ರತಿಪಾದ್ಯತ್ವವಿದೆ ಎಂಬುದಾಗಿ ಈ ಪ್ರಸಂಗದಲ್ಲಿ ಸೂತಾರ್ಥವನ್ನು ತಿಳಿಯಬೇಕು.

ಈ ಪ್ರಕಾರವಾಗಿ ವಿಷ್ಣುವಿನ ಸರ್ವೋತ್ತಮತ್ವವೇ ಶಾಸ್ತ್ರಾರ್ಥವಾಗಿ ಭಗವಂತನಿಂದ ಹಾಗೂ ಶ್ರುತಿಯಿಂದ ಹೇಳಲ್ಪಟ್ಟಿದೆ. ಹೀಗಾಗಿ ವಿಷ್ಣುಸರ್ವೋತ್ತಮತ್ವವೇ ವೇದಾದಿಪ್ರತಿಪಾದ್ಯವಾಗಿದೆ. ಹೊರತು ಬ್ರಹ್ಮಾತ್ಮೈಕ್ಯವು ವೇದಾದಿಪ್ರತಿಪಾದ್ಯವಾಗಿಲ್ಲ ಎಂದು ಸಿದ್ಧವಾಗುತ್ತದೆ.

**ಟೀಕಾ :- ಏವಂ ಪ್ರಕರಣಾರ್ಥಮುಪಪಾದ್ಯ ತಸ್ಯ ಪ್ರಯೋಜನಮಾಹ-**

**- ಮಾಯಾವಾದಖಂಡನ -**

ಇತಿ ಸರ್ವಜ್ಞಮುನಿನಾ ಮಾಯಾವಾದತಮೋಽಖಿಲಮ್ ।
ನಿರಸ್ತಂ ತತ್ತ್ವವಾದೇನ ಸತಾಂ ಸಂಶಯನುತ್ತಯೇ ॥

**ಅನ್ಯಥಾ ಹಿ ವಿಪ್ರತಿಪತ್ತೇಃ ಸಂಶಯೋ ಭವತಿ ।**

**ಅನುವಾದ :-** ಈ ರೀತಿಯಾಗಿ ವಿಷ್ಣುವಿನ ಸರ್ವೋತ್ತಮತ್ವರೂಪವಾದ ಪ್ರಕರಣಾರ್ಥವನ್ನು ಉಪಪಾದನೆ ಮಾಡಿ, ಅದರ ಪ್ರಯೋಜನವನ್ನು ಹೇಳುತ್ತಾರೆ -

**ಇತಿ ಸರ್ವಜ್ಞಮುನಿನಾ ಮಾಯಾವಾದತಮೋಽಖಿಲಮ್ ।**
**ನಿರಸ್ತಂ ತತ್ತ್ವವಾದೇನ ಸತಾಂ ಸಂಶಯನುತ್ತಯೇ ॥** (ಮೂಲ)

ಇತಿ=ಈ ಪ್ರಕಾರವಾಗಿ ಸರ್ವಜ್ಞಮುನಿನಾ=ಸರ್ವಜ್ಞಮುನಿಗಳಾದ ಶ್ರೀಮದಾಚಾರ್ಯರಿಂದ ಸತಾಂ ಸಂಶಯನುತ್ತಯೇ=ಸಜ್ಜನರ ಸಂಶಯಪರಿಹಾರಕ್ಕಾಗಿ ತತ್ತ್ವವಾದೇನ=ತತ್ತ್ವವಾದದಿಂದ ಅಖಿಲಂ ಮಾಯಾವಾದತಮಃ=ಸಮಗ್ರ ಮಾಯಾವಾದಮತದಿಂದ ಉಂಟಾದ ಭ್ರಾಂತಿಯು ನಿರಸ್ತಂ=ನಿರಾಕರಿಸಲ್ಪಟ್ಟಿದೆ.

ಒಂದುವೇಳೆ ಭ್ರಾಂತಿನಿರಾಕರಣೆ ಮಾಡದೇ ಹೋದರೆ ವಿಪ್ರತಿಪತ್ತಿಯಿಂದಾಗಿ (ಎರಡು ಶಾಸ್ತ್ರಗಳ ವಿರುದ್ಧ ವಾಕ್ಯಗಳಿಂದ) ಸಜ್ಜನರಿಗೆ ಸಂಶಯವು ಉಳಿದುಬಿಡುತ್ತದೆ. ಆ ಕಾರಣ ಸಜ್ಜನರಿಗೆ ಸಂಶಯ ಉಳಿಯಬಾರದು, ಸರಿಯಾದ ತತ್ತ್ವಜ್ಞಾನ ಆಗಬೇಕು ಎಂಬ ಅಭಿಪ್ರಾಯದಿಂದ ಆಚಾರ್ಯರು ಸಂಶಯಪರಿಹಾರಕ್ಕಾಗಿ ಮಾಯಾವಾದ ಮತದಿಂದ ಉಂಟಾದ ಭ್ರಾಂತಿಯ ನಿರಾಕರಣೆ ಮಾಡಿದ್ದಾರೆ ಎಂದು ಭಾವ.

**ಟೀಕಾ :- ಪ್ರಕರಣಾರ್ಥಮುಪಸಂಹರನ್ ತದನುಗುಣಂ ಭಗವದ್ವಾಕ್ಯಮೇವ ಪಠತಿ -**

**- ಮಾಯಾವಾದಖಂಡನ -**

ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ ಮಾಯಾವಾದಖಂಡನಂ ಸಂಪೂರ್ಣಂ ॥**

**ಅನುವಾದ :-** ಪ್ರಕರಣಾರ್ಥವನ್ನು ಉಪಸಂಹಾರ ಮಾಡುವವರಾಗಿ, ಪ್ರಕರಣಪ್ರತಿಪಾದ್ಯವಾದ ಸರ್ವೋತ್ತಮತ್ವಕ್ಕೆ ಅನುಗುಣವಾದ ಮಹಾಭಾರತರೂಪವಾದ ವೇದವ್ಯಾಸರ ವಾಕ್ಯವನ್ನೇ ಪಠಿಸುತ್ತಾರೆ -

**ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥ (ಮೂಲ)**

ನಾರಾಯಣಸಮಂ (ದೈವಂ) = ನಾರಾಯಣಸಮನಾದ ದೇವನು ನ ಭೂತಂ = ಹಿಂದೆ ಇರಲಿಲ್ಲ, ನಾಸ್ತಿ = ಈಗ ಇಲ್ಲ, ನ ಭವಿಷ್ಯತಿ = ಮುಂದೆಯೂ ಬರುವುದಿಲ್ಲ, ಅಹಂ=ನಾನು ಏತೇನ ಸತ್ಯವಾಕ್ಯೇನ = ಈ ಸತ್ಯವಾಕ್ಯದಿಂದ ಸರ್ವಾರ್ಥಾನ್ ಸಾಧಯಾಮಿ = ಎಲ್ಲ ಅರ್ಥಗಳನ್ನೂ ಸಾಧಿಸುತ್ತೇನೆ ಎಂದು ಮೂಲಾರ್ಥವಾಗುತ್ತದೆ.

**॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಮಾಯಾವಾದಖಂಡನವು ಸಂಪೂರ್ಣವಾಯಿತು ॥**

**ಅವತಾರಿಕೆ :-** ಶ್ರೀಮಟ್ಟೀಕಾಕೃತ್ಪಾದರು ತಮ್ಮ 'ಮಾಯಾವಾದಖಂಡನಟೀಕಾ' ರೂಪವಾದ ಗ್ರಂಥವನ್ನು ಸಮಾಪ್ತಿಗೊಳಿಸಿದವರಾಗಿ ಕೊನೆಯಲ್ಲಿಯೂ ಮಂಗಲವನ್ನು ಆಚರಿಸುತ್ತಾರೆ -

[38]ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।
ಧ್ರಿಯತಾಂ [39]ಸದಯೇ ಹೃದಯೇ [40]ಕಮಲಾಮಹಿಲೇನ ಪುರುಷೇಣ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮಾಯಾವಾದಖಂಡನ
-ವಿವರಣಂ ಜಯತೀರ್ಥಭಿಕ್ಷುವಿರಚಿತಂ ಸಂಪೂರ್ಣಮ್ ॥

ಯಾವ ರೀತಿಯಾಗಿ ಒಬ್ಬ ಭಿಕ್ಷುವು ಪುಷ್ಪಮಾಲೆಯನ್ನು ರಚಿಸಿ ಐಶ್ವರ್ಯ ಉಳ್ಳ ಪುರುಷನಿಗೆ ನೀಡಿದರೆ ಅವನು ದಯಾಸಹಿತವಾದ ಹೃದಯದಲ್ಲಿ ಧರಿಸುತ್ತಾನೋ ಅದರಂತೆ,

ಜಯತೀರ್ಥಾಖ್ಯೇನ ಭಿಕ್ಷುಣಾ=ಜಯತೀರ್ಥರೆಂಬ ಭಿಕ್ಷುಗಳಿಂದ ವಚನಪ್ರಸೂನಮಾಲಾ=ಟೀಕಾರೂಪ ಮಾತುಗಳೆಂಬ ಹೂಗಳ ಮಾಲೆಯು ರಚಿತಾ=ರಚಿಸಲ್ಪಟ್ಟಿದೆ. ಆ ಹೂಮಾಲೆಯು ಕಮಲಾಮಹಿಲೇನ=ಮಹಾಲಕ್ಷ್ಮಿಯೇ ಪತ್ನಿಯಾಗಿ ಉಳ್ಳ ಪುರುಷೇಣ=ನಾರಾಯಣನಿಂದ ಸದಯೇ=ದಯೆಯಿಂದ ಕೂಡಿದ ಹೃದಯೇ= ಹೃದಯದಲ್ಲಿ ಧ್ರಿಯತಾಂ=ಧರಿಸಲ್ಪಡಲಿ.

॥ ಇಲ್ಲಿಗೆ ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ
ಶ್ರೀಮದಾನಂದತೀರ್ಥಭಗವತ್ಪಾದಚಾರ್ಯವಿರಚಿತಮಾಯಾವಾದಖಂಡನದ
ವಿವರಣೆಯು (ಟೀಕೆಯು) ಸಂಪೂರ್ಣವಾಯಿತು ॥

★★★★

38) ಯಥಾ ಕೇನಚಿತ್ ಭಿಕ್ಷುಣಾ ರಚಿತಾ ಪುಷ್ಪಮಾಲಾ ಐಶ್ವರ್ಯವಂತಂ ಪುರುಷಂ ಪ್ರತಿ ದತ್ತಾ ಚೇತ್, ತೇನ ದಯಯಾ ಹೃದಯೇ ಧ್ರಿಯತೇ ತದ್ವದಿತ್ಯರ್ಥಃ । (ಶ್ರೀನಿ)

39) ಸದಯೇ ದಯಯಾ ಸಹಿತೇ ।

40) 'ಮಹಿಲಾ ವನಿತಾ ಪ್ರಿಯಾ' ಇತ್ಯಭಿಧಾನಾತ್, ಕಮಲಾ ಮಹಾಲಕ್ಷ್ಮೀಃ ಮಹಿಲಾ ವನಿತಾ ಯಸ್ಯಾಸೌ ತಥೋಕ್ತಃ, ತೇನೇತ್ಯರ್ಥಃ ।

ಶ್ರೀಮದಾಚಾರ್ಯರು ರಚಿಸಿರುವ ಸರ್ವಮೂಲಗ್ರಂಥಗಳಲ್ಲಿ ''ಖಂಡನತ್ರಯ'' ಎಂದೇ ಪ್ರಸಿದ್ಧವಾದ ಗ್ರಂಥಗಳು

1 ) ಮಾಯಾವಾದಖಂಡನ
2 ) ಪ್ರಪಂಚಮಿಥ್ಯಾತ್ವಾನುಮಾನಖಂಡನ
3 ) ಉಪಾಧಿಖಂಡನ

## ಮಾಯಾವಾದಖಂಡನ

''ವೇದಾದಿಶಾಸ್ತ್ರಗಳು ಜೀವ-ಬ್ರಹ್ಮರ ಐಕ್ಯವನ್ನು ಪ್ರತಿಪಾದಿಸುವುದಿಲ್ಲ. ವಿಷ್ಣುವಿನ ಸರ್ವೋತ್ತಮತ್ವವೇ ಸರ್ವಶಾಸ್ತ್ರಗಳ ಪ್ರತಿಪಾದ್ಯಪ್ರಮೇಯ'' ಎಂದು ಸಮರ್ಥಿಸುವುದಕ್ಕಾಗಿ ಹೊರಟದ್ದು ಮಾಯಾವಾದಖಂಡನ.

ಖಂಡನತ್ರಯ ಎಂದರೆ ವೇದಾಂತಗ್ರಂಥಗಳ ಅಧ್ಯಯನ ಪ್ರಾರಂಭಿಸುವ ಜಿಜ್ಞಾಸುಗಳಿಗೆ ಉತ್ತಮ ಬುನಾದಿ ಹಾಕುವ ಪುಟ್ಟ ಪುಟ್ಟ ಗ್ರಂಥಗಳು.

ಆಕಾರದಲ್ಲಿ ಚಿಕ್ಕದಾದರೂ ಅರ್ಥದಲ್ಲಿ ಬೃಹತ್ ಆಗಿವೆ. ಅಂತೆಯೇ ಪಾಠಕ್ರಮದಲ್ಲಿ ನಿಯಮೇನ ಅಳವಡಿಸುವ ಪಠ್ಯಗ್ರಂಥಗಳಾಗಿವೆ.

ಇಂತಹ ಖಂಡನತ್ರಯದ ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಸಹಾಯಕವಾಗಲಿ ಎಂಬ ದೃಷ್ಟಿಯಿಂದ ಖಂಡನತ್ರಯಕ್ಕೆ ಕನ್ನಡ ಅನುವಾದ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ. ಅದರ ಮೊದಲ ಹಂತವಾಗಿ 'ಮಾಯಾವಾದಖಂಡನ'ಗ್ರಂಥಕ್ಕೆ ಕನ್ನಡ ಅನುವಾದ ಸಿದ್ಧವಾಗಿದೆ.